ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹಾಗೂ ಅಮಾನತ್ತಿನ ಅವಧಿ ದಿನಾಂಕ: 22–11–2005 ರಿಂದ 6–1–2006 ರವರೆಗೆ ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಉತ್ತರ ವಲಯ, ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 30–8–2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು, ನಡತೆ ನಿಯಮಗಳನ್ನು ಉಲ್ಲಂಘಿಸಿರುವುದಕ್ಕೆ ತಕ್ಕ ದಂಡನೆಯನ್ನು ವಿಧಿಸಬಹುದಾಗಿದ್ದರೂ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಶಿಕ್ಷೆ ಆರೋಪಕ್ಕೆ ಅತೀ ಹೆಚ್ಚಿನ ದಂಡನೆಯಾಗಿರುತ್ತದೆ. ಆದ್ದರಿಂದ ಇವರು ಎಸಗಿರುವ ಆರೋಪಕ್ಕೆ ಸೇವೆಗೆ ಪುನರ್ ನೇಮಕ ಮಾಡಿ ಇವರ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಯಾಗುವಂತೆ ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವಂತೆ ದಂಡನೆ ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ : 31–5–2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ/66/ಪೊಸಿಅ/2007, ಬೆಂಗಳೂರು ದಿ:12ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ವೈ.ಆರ್.ಸೈದಾಪೂರ, ಎ.ಹೆಚ್.ಸಿ.–137, ಡಿ.ಎ.ಆರ್., ಗದಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ರದ್ದುಪಡಿಸಿ, ಅರ್ಜಿದಾರರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡುವುದು.

2) ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ವಿಧಿಸಿ ಇವರ ಅಮಾನತ್ತಿನ ಅವಧಿ ದಿನಾಂಕ : 22–11–2005 ರಿಂದ 6–1–2006 ರ ಅಮಾನತ್ತಿನ ಅವಧಿಯೆಂದೇ ಪರಿಗಣಿಸುವುದು.

3) ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿ.ಎಸ್.ಸಿ/26/ಸಿ.ಎನ್.ಎಸ್/2007, ದಿನಾಂಕ : 31–5–2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.1127

**ವಿಷಯ:** ಶ್ರೀ ವೈ.ಡಿ. ಅಗಸಿಮನಿ, ಪಿ.ಎಸ್.ಐ., ಹಿಂದೆ ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ ಹಾಲಿ ಖಾನಾಪೂರ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಧಾರವಾಡ, ಇವರ ಆದೇಶ ಸಂಖ್ಯೆ:ಸಿಬ್ಬಂದಿ–6/ಸಿ.ಆರ್–55 2004–2005, ದಿನಾಂಕ:16–7–2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾನಿರೀಕ್ಷಕರು ಉತ್ತರ ವಲಯ ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು 61/ಉವ/2005, ದಿನಾಂಕ:15–03–2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12–1–2007.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರಪತ್ರ ಸಂಖ್ಯೆ:ಅಪೀಲು–2/143/ 2006/2007 ದಿನಾಂಕ:12–3–2007.

**ಪ್ರಸ್ತಾವನೆ:**

ಶ್ರೀ ವೈ.ಡಿ. ಅಗಸಿಮನಿ ಪಿ.ಎಸ್.ಐ., ಧಾರವಾಡ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು)ನಿಯಮಾವಳಿ 1965ರ ನಿಯಮ7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ಧಾರವಾಡ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ದಾಖಲಾಗುವ ಘೋರವಲ್ಲದ ಪ್ರಕರಣಗಳಲ್ಲಿ ದಿನಚರಿಗಳನ್ನು ಕಳುಹಿಸುವಂತೆ ಡಿ.ಎಸ್.ಪಿ. ಧಾರವಾಡ ಗ್ರಾಮೀಣ ರವರು ಪ್ರತಿ ತಿಂಗಳು ಜ್ಞಾಪನ ಪತ್ರ ಮೂಲಕ ತಿಳಿಸಿದಾಗ್ಯೂ ನೀವು ಸದರಿ ಪ್ರಕರಣದಲ್ಲಿ ದಿನಚರಿಗಳನ್ನು ಕಳುಹಿಸದ ಕರ್ತವ್ಯದಲ್ಲಿ ಚ್ಯುತಿ ಎಸಗಿ ಮೇಲಾಧಿಕಾರಿಗಳ ಆದೇಶ ಉಲ್ಲಂಘನೆ ಮಾಡಿರುವಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ದಾರವಾಡ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:16-7-2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಮುಂಬರುವ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು (ಉತ್ತರ ವಲಯ)ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:15/3/2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆಲಿಖಿತ ಸೂಚನೆಯನ್ನು ಪಾಲಿಸದೇ ಇದ್ದಲ್ಲಿ ಸರ್ಕಾರಿ ಸುತ್ತೋಲೆಯಲ್ಲಿ ಎರಡು ವಾರ್ಷಿಕ ವೇತನವನ್ನು ತಡೆಹಿಡಿಯುವ ಮಾರ್ಗದರ್ಶನವಿದೆ, ಆದರೆ ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಮುಂಬರುವ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಿದ್ದಾರೆ ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 116 ಪೊಸಿಅ 2007 ಬೆಂಗಳೂರು, ದಿನಾಂಕ:7ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಡಿ. ಅಗಸಿಮನಿ ಪಿ.ಎಸ್.ಐ. ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1126

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಬಿ.ಡೊಳ್ಳಿನ, ಪಿಎಸ್ಐ (ನಿಸ್ತಂತು), ಹಾವೇರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಹಾವೇರಿಜಿಲ್ಲೆ ಇವರ ಆದೇಶ ಸಂಖ್ಯೆ:ಪಿಆರ್/158/03 ಒಬಿ ನಂ. 502/2003-04.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ IGP (ಉತ್ತರ ವಲಯ) ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು 18 ಉವ 2004 ದಿನಾಂಕ 22-9-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 26/8/2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)110/2005, ದಿ: 22-9-2006.

**ಪ್ರಸ್ತಾವನೆ:**

ಶ್ರೀ ಹೆಚ್. ಬಿ. ಡೊಳ್ಳಿನ, ಪಿ.ಎಸ್.ಐ., ಹಾವೇರಿ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಿದೆ.

**ದೋಷರೋಪಣೆ:**

ನೀವು ಜಿಲ್ಲಾ ನಿಯಂತ್ರಣ ಕೇಂದ್ರ ಹಾವೇರಿಯಲ್ಲಿ ಪಿ.ಎಸ್.ಐ.(ನಿಸ್ತಂತು) ಎಂದು ಕಾರ್ಯನಿರ್ವಹಿಸುತ್ತಿದ್ದು, ಪ್ರತಿ ದಿನ ನಿಯಂತ್ರಣ ಕೇಂದ್ರಕ್ಕೆ ಬರುವ ಅಧಿಕಾರಿಗಳಿಗೆ ಎನ್ ಸರ್ ಏನು ಇಲ್ಲವೇನ್ರಿ ಅಂತಾ ದುಡ್ಡು ಕೇಳುವ ನೆಪದಲ್ಲಿ ಅವರೊಂದಿಗೆ ವರ್ತಿಸುತ್ತಿದ್ದು ಹಾಗೂ ದಿನಾಂಕ::21–6–2003 ರಿಂದ ಪಿ.ಐ. (ನಿಸ್ತಂತು) ಇವರು ರಜೆಯ ಮೇಲೆ ಹೋಗುವಾಗ ನೀವು ರಜೆಯ ಮೇಲೆ ಇದ್ದುದರಿಂದ ನಿಯಂತ್ರಣ ಕೇಂದ್ರದ ಪ್ರಭಾರವನ್ನು ಹಿರಿಯ ಎ.ಎಸ್.ಐ. (ನಿಸ್ತಂತು) ಎ.ವಿ.ರಾಯ್ಕರ ಇವರಿಗೆ ಕೊಟ್ಟಿದ್ದು ನಂತರ (ಪಿ.ಐ. ನಿಸ್ತಂತು) ಇವರು ರಜೆಯಿಂದ ಬಂದ ನಂತರ ನಿಯಂತ್ರಣ ಕೇಂದ್ರದ ಪ್ರಭಾರವನ್ನು ನಿಮಗೇಕೆ ಕೊಟ್ಟು ಹೋಗಲಿಲ್ಲ ಎಂದು ಪಿ.ಐ. ರವರಿಗೆ ಏರಿದ ಧ್ವನಿಯಲ್ಲಿ ಮಾತನಾಡಿದ್ದು ಅಲ್ಲದೆ ಅವರುಗಳ ಮೇಲೆ ಅಟ್ರಾಸಿಟಿ ಕೇಸ್ ಮಾಡಿಸುತ್ತೇನೆ ಅಂತ ದುರಹಂಕಾರದಿಂದ ವರ್ತಿಸಿದ್ದು ಅಲ್ಲದೇ ರಾತ್ರಿ ಸಮಯದಲ್ಲಿ ಅಮಲೇರುವ ಪದಾರ್ಥ ಸೇವಿಸಿ ನಿಯಂತ್ರಣ ಕೇಂದ್ರಕ್ಕೆ ಬಂದು ಕರ್ತವ್ಯದ ಮೇಲಿರುವ ಸಿಬ್ಬಂದಿ ಜನರ ಜೊತೆಗೆ ಅಸಹ್ಯವಾಗುವಂತೆ ಮಾತನಾಡಿದ್ದು ನಿಮ್ಮ ಸ್ಥಾನದ ಅರಿವು ಇಟ್ಟುಕೊಳ್ಳದೇ ಪೊಲೀಸ್ ಇಲಾಖೆಗೆ ಕಂಡುಬರುವ ರೀತಿಯಲ್ಲಿ ವರ್ತಿಸುತ್ತಾ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆಯನ್ನು ಪ್ರದರ್ಶಿಸಿದ ಬಗ್ಗೆ ಈ ದೋಷಾರೋಪಣೆ ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ತೀವ್ರ ಚ್ಯುತ್ತಿ ಹಾಗೂ ನಿರ್ಲಕ್ಷತನ ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಹಾವೇರಿ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ : 3–2–2004 ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮೂರು ತಿಂಗಳುಗಳ ಕಾಲ ತಡೆಹಿಡಿಯಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 22–9–2004 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಜಿಲ್ಲಾ ನಿಯಂತ್ರಣ ಕೇಂದ್ರಕ್ಕೆ ಬರುವ ಅಧಿಕಾರಿಗಳ ಜೊತೆ ಅಗೌರವವಾಗಿ ವರ್ತಿಸಿದ್ದು ಸಾಬೀತಾಗಿರುತ್ತದೆ. ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 82 ಪೊಸಿಅ 2006 ಬೆಂಗಳೂರು, ದಿನಾಂಕ:8ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ. ಹೆಚ್.ಬಿ.ದೊಡ್ಡಿನ, ಪಿ.ಎಸ್.ಐ. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1125

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಮಹದೇವ, ಸಿಪಿಸಿ 396, ಗುಲ್ಬರ್ಗಾ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಉಲ್ಲೇಖ:**
1. ಶಿಸ್ತು ಪ್ರಾಧಿಕಾರಿ ಹಾಗೂ SP ಗುಲ್ಬರ್ಗಾ ಇವರ ಆದೇಶ ಸಂಖ್ಯೆ: 19/DE/2003, DOB NO. 60/2006 ದಿನಾಂಕ 21/1/2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು (ಈಶಾನ್ಯ ವಲಯ)ಗುಲ್ಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/22/ಈವ/2006 ಅಪು ನಂ. 182/ ಈವ/2006 ದಿನಾಂಕ 18/3/2006
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:2–7–2006

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/82/2006–07 ದಿನಾಂಕ 25/9/2006

**ಪ್ರಸ್ತಾವನೆ:**

ಶ್ರೀ ಮಹದೇವ, ಸಿಪಿಸಿ–396 ಗುಲ್ಬರ್ಗಾ ಜಿಲ್ಲೆ ಇವರ ವಿರುದ್ದ (ಇನ್ನುಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6&8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾಧಿತ ಪೊಲೀಸ್ ಅಧಿಕಾರಿಗಳಾದ 1} ಶ್ರೀ.ಶಾಮರಾವ ಸಿಹೆಚ್‌ಸಿ 568 ಸಂಚಾರಿ ಪೊಲೀಸ್ ಠಾಣೆ ಗುಲ್ಬರ್ಗಾ. ಹಾಗೂ 2} ಶ್ರೀ.ಮಹಾದೇವ ಸಿಪಿಸಿ 2040 ಸಂಚಾರಿ ಪೊಲೀಸ್ ಠಾಣೆ ಗುಲ್ಬರ್ಗಾ ಇವರು ಗುಲ್ಬರ್ಗಾ ಸಂಚಾರಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 16–4–2003 ರಂದು ರಾತ್ರಿ 8–15 ಗಂಟೆಯಿಂದ 8–40 ಗಂಟೆಯ ಅವಧಿಯಲ್ಲಿ ಒಬ್ಬರಿಗೊಬ್ಬರು ಜಗಳ ಆಡಿ ಅವಾಚ್ಯ ಶಬ್ದಗಳಿಂದ ಬೈದು ಒಬ್ಬರ ವಿರುದ್ದ ಇನ್ನೊಬ್ಬರು ಕ್ರಿಮಿನಲ್ ಕೇಸುಗಳನ್ನು ದಾಖಲಿಸಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಮತ್ತು ದುರ್ನಡತೆ ಪ್ರದರ್ಶಿಸಿ ಶಿಸ್ತಿನ ಇಲಾಖೆಯಲ್ಲಿ ಅಶಿಸ್ತಿನಿಂದ ವರ್ತಿಸಿ ಇಲಾಖೆಗೆ ಕೆಟ್ಟ ಹೆಸರು ತರಲು ಪ್ರಯತ್ನಿಸಿದ್ದು ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿ: 21–1–2006 ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯವಾಗಿ ನಿವೃತ್ತಿಗೊಳಿಸಿ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುವಾಗಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಮೇಲ್ಮನವಿದಾರರು ದಿನಾಂಕ:4/6/1993 ರಂದು ಪೊಲೀಸ್ ಇಲಾಖೆಯಲ್ಲಿ ನೇಮಕಾತಿ ಹೊಂದಿ ಈ ರೀತಿಯಾಗಿ ಪದೇ ಪದೇ ತನ್ನ ಸಹ–ಊದ್ಯೋಗಿ ಹಾಗೂ ಮೇಲಾಧಿಕಾರಿಗಳೊಂದಿಗೆ ಅಸಭ್ಯತನದಿಂದ ವರ್ತಿಸಿರುವುದು ಇವರ ಸೇವಾ ವಿವರದಿಂದ ತಿಳಿದುಬಂದಿರುತ್ತದೆ. ಆದಾಗ್ಯೂ ಮುಂದೆ ಹೀಗಾಗದಂತೆ ನೋಡಿಕೊಳ್ಳಲು ಕಡೆಯ ಅವಕಾಶ ಕಲ್ಪಿಸಿ, ಅವರ ವಿರುದ್ಧ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ತೆಗೆದುಕೊಂಡಿರುವ ಶಿಸ್ತಿನ ಕ್ರಮವನ್ನು ಮಾರ್ಪಡಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

ಶ್ರೀ. ಮಹಾದೇವ, ಮಾಜಿ ಸಿಪಿಸಿ–396, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ದ ಎಸ್.ಪಿ. ಗುಲ್ಬರ್ಗಾ ಇವರ ಆದೇಶ ಸಂ. 19/ಡಿಇ/2003, ದಿ:21/1/2006ರ ಪ್ರಕಾರ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ ಅವರ ಅಮಾನತ್ತಿನ ಅವಧಿ ಅಮಾನತ್ತೆಂದು ಪರಿತಣಿಸಿದ ಆದೇಶವನ್ನು ಮಾರ್ಪಡಿಸಿ ಅವರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ಮಟ್ಟಕ್ಕೆ ಇಳಿಸಲಾಗಿದೆ. ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಗಳಿಸಬೇಕು. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದೆ ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ಕರ್ತವ್ಯರಹಿತ (ಡೈಜ್ ನಾನ್) ಎಂದು ಪರಿಗಣಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ಆರೋಪಗಳು ಇಲಾಖೆ ವಿಚಾರಣೆಯಲ್ಲಿ ಸಾಬೀತಾಗಿದ್ದು, ಸಲ್ಲದ ರೀತಿಯಲ್ಲಿ ಕರ್ತವ್ಯ ಚ್ಯುತಿ ಎಸಗಿದ್ದಾರೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ತೀವ್ರತರ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರ ಕಡಿಮೆ ಗೊಳಿಸಿದ್ದರಿಂದ ಈ ಪ್ರಕರಣದಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 127 ಪೊಸಿಅ 2007 ಬೆಂಗಳೂರು, ದಿನಾಂಕ:12ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹದೇವ ಸಿಪಿಸಿ 396, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1124

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ಎಸ್. ಶಿವಮ್ಮ ಕೋಂ ಲೇಟ್ ಎಂ.ಶಿವಪ್ಪ ಮಾಜಿ ಎಎಸ್‌ಐ, ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ ಇವರಿಗೆ ಸರ್ಕಾರದಿಂದ ಸಿಗುವ ಎಲ್ಲಾ ಸವಲತ್ತುಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಪನ್ಸಿ/ ಡಿಡಿ/19/1991-92, ಓಬಿ ಸಂಖ್ಯೆ:130/2000-2001, ದಿನಾಂಕ:12-06-2000.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ :ಅಪೀಲು/33/2000-01, ಓಬಿ ಸಂಖ್ಯೆ: 100/2000-01, ದಿನಾಂಕ:04-01-2001.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23-12-2004.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/11/2005, ದಿನಾಂಕ:08-07-2005 ಮತ್ತು 22-02-2006.

5) ಸರ್ಕಾರದ ಆದೇಶ ಸಂಖ್ಯೆ:ಒಇ 312 ಪೊಸಿಅ 2005, ದಿನಾಂಕ:15-05-2006.

6) ಶ್ರೀಮತಿ ಎಸ್. ಶಿವಮ್ಮ ಕೋಂ ಲೇಟ್ ಎಸ್. ಶಿವಪ್ಪ, ಇವರ ದಯಾ ಅರ್ಜಿ ದಿನಾಂಕ:17/6/2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ಶಿವಪ್ಪ, ಮಾಜಿ ಎಎಸ್‌ಐ ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ ಇವರ ವಿರುದ್ಧ ಚನ್ನಪಟ್ಟಣದ ಅಕ್ಕೂರು ಪೊಲೀಸ್ ಠಾಣೆಯಲ್ಲಿ ಐಪಿಸಿಯ ಸೆಕ್ಷನ್ 307ರಡಿಯಲ್ಲಿ ಕ್ರಿಮಿನಲ್ ಪ್ರಕರಣ ಸಂಖ್ಯೆ:129/91ನ್ನು ದಾಖಲು ಮಾಡಲಾಗಿತ್ತು. ಹಾಗೂ ಜಿಲ್ಲಾ ಮತ್ತು ಸೆಷನ್ ನ್ಯಾಯಾಲಯ ಬೆಂಗಳೂರಿನಲ್ಲಿ ಎಸ್.ಸಿ.17/93ನ್ನು ದಾಖಲಿಸಲಾಗಿತ್ತು. ಅವರ ವಿರುದ್ಧ ದೋಷಾರೋಪಣೆ: "ಶಿಸ್ತು ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ:25-10-1991 ರಂದು ಸಹೋದ್ಯೋಗಿಯಾದ ಶ್ರೀ ಲಕ್ಷ್ಮಿನರಸಿಂಹಯ್ಯ ಎಎಸ್‌ಐ ಇವರ ಮನೆಗೆ ಅರ್ಧ ರಾತ್ರಿಯಲ್ಲಿ ಹೋಗಿ, ಅವರ ಹೊಟ್ಟೆಗೆ ತಿವಿದು ರಕ್ತ ಗಾಯ ಮಾಡಿರುವುದು". ಗೌರವಾನ್ವಿತ ನ್ಯಾಯಾಲಯವು ದಿನಾಂಕ:07-06-1998ರಂದು ತೀರ್ಪು ನೀಡಿ ಇವರಿಗೆ ಏಳು ವರ್ಷಗಳ ಕಾಲ ಕಠಿಣ ಸಜೆ ಮತ್ತು ರೂ.10,000/-ಗಳ ದಂಡ ವಿಧಿಸಿ, ತಪ್ಪಿದ್ದಲ್ಲಿ ಮೂರು ತಿಂಗಳ ಕಾಲ ಸಾದ ಸಜೆಯನ್ನು ವಿಧಿಸಿತ್ತು. ಅಪೀಲು ಸಂಖ್ಯೆ:509/98ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು 10-06-98 ರಂದು ಇದಕ್ಕೆ ತಡೆಯಾಜ್ಞೆ ನೀಡಿ ದಿನಾಂಕ:26-05-2004ರಲ್ಲಿನ ತೀರ್ಪಿನಲ್ಲಿ ನೀಡಿ ದಿನಾಂಕ:07-06-1998ರ ಆದೇಶವನ್ನು ರದ್ದುಪಡಿಸಿ ಶ್ರೀ ಶಿವಪ್ಪ ಇವರಿಗೆ ರೂ.5,000/-ಗಳ ದಂಡ ವಿಧಿಸಿತ್ತು.

ಕ್ರಿಮಿನಲ್ ವಿಚಾರಣೆಗೆ ಒಳಪಟ್ಟಿದ್ದರಿಂದ ಶ್ರೀ ಎಂ.ಶಿವಪ್ಪ ಎಎಸ್‌ಐ ರವರನ್ನು ದಿನಾಂಕ:12-02-2000 ರ ಆದೇಶದಲ್ಲಿ ಸೇವೆಯಿಂದ ವಜಾ ಮಾಡಿ ಅಮಾನತ್ತಿಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ದಂಡನೆಯನ್ನು ಶಿಸ್ತುಪ್ರಾಧಿಕಾರಿಯಾದ ಬೆಂಗಳೂರು ಜಿಲ್ಲಾ ಪೊಲೀಸ್ ಅಧೀಕ್ಷಕರು ವಿಧಿಸಿದ್ದರು. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಐಜಿಪಿ ಕೇಂದ್ರ ವಲಯ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ:04-01-2001ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಶ್ರೀ ಎಂ.ಶಿವಪ್ಪ, ಮಾಜಿ ಎಎಸ್‌ಐ ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಮೇಲೆ ಓದಲಾದ (3)ರಲ್ಲಿ ದಿನಾಂಕ:23/12/2004ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದರು, ಸದರಿ ಪರಿಷ್ಕರಣ ಮೇಲ್ಮನವಿಯ ಮೇಲೆ ಮೇಲೆ ಓದಲಾದ (4)ರ ಪತ್ರ ದಿನಾಂಕ:8/7/2005 ಮತ್ತು 22/2/2006ರಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಸರ್ಕಾರಕ್ಕೆ ವರದಿ ಕಳುಹಿಸಿದ್ದು, ಅದರಲ್ಲಿ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲು ಶಿಫಾರಸ್ಸು ಮಾಡಿದ್ದರು. ಅದರಂತೆ ಸರ್ಕಾರ ಪರಿಶೀಲಿಸಿ ಪರಿಷ್ಕರಣ ಮೇಲ್ಮನವಿಯಲ್ಲಿ ಹೊಸದಾಗಿ ಪರಿಶೀಲಿಸಬಹುದಾದ ಯಾವುದೇ ಹೊಸ ಅಂಶಗಳು ಕಂಡುಬಂದಿಲ್ಲವಾದ್ದರಿಂದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಿ ಮೇಲೆ ಓದಲಾದ ಕ್ರಮಸಂಖ್ಯೆ (5)ರ ದಿನಾಂಕ:15-05-2006ರಲ್ಲಿ ಸರ್ಕಾರ ಆದೇಶ ಹೊರಡಿಸಿತ್ತು.

ದಿನಾಂಕ:15-05-2006ರ ಸರ್ಕಾರಿ ಆದೇಶದ ವಿರುದ್ಧ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಯಾಪತ್ರ ದಿನಾಂಕ:17/6/2006ರಲ್ಲಿ ಶ್ರೀಮತಿ ಶಿವಮ್ಮ ಕೋಂ ದಿವಂಗತ ಎಂ.ಶಿವಪ್ಪ, ಮಾಜಿ ಎಎಸ್‌ಐ ಇವರು ತಮ್ಮ ಪತಿಯಾದ ಶ್ರೀ ಎಂ. ಶಿವಪ್ಪ ಇವರು ದಿನಾಂಕ:23/9/2005ರಂದು ನಿಧನರಾಗಿರುವುದರಿಂದ ತಮಗೆ ನಾಲ್ಕು ಮಕ್ಕಳಿದ್ದು ಕುಟುಂಬ ನಿರ್ವಹಣೆಗೆ ತುಂಬಾ ಕಷ್ಟವಾಗಿರುವುದರಿಂದ ತಮಗೆ ಸರ್ಕಾರದಿಂದ ಸಿಗಬೇಕಾದ ನಿವೃತ್ತಿ ಸೌಲಭ್ಯ ಹಾಗೂ ಕುಟುಂಬ ಪಿಂಚಣಿ ಮತ್ತು ಇತರ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡಲು ಆದೇಶ ಹೊರಡಿಸಬೇಕೆಂದು ಕೋರಿದ್ದರು. ಅದರಂತೆ ಸರ್ಕಾರ ಅರ್ಜಿದಾರರ ದಯಾ ಅರ್ಜಿಯನ್ನು ಪುನರ್ ಪರಿಶೀಲಿಸಿ ಈ ಕೆಳ ಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 312 ಪೊಸಿಅ 2005 ಬೆಂಗಳೂರು, ದಿನಾಂಕ:12ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಸರ್ಕಾರ ಕೂಲಂಕಶವಾಗಿ ಪರಿಶೀಲಿಸಿ ದಿವಂಗತ ಎಂ.ಶಿವಪ್ಪ, ಮಾಜಿ ಎಎಸ್ಐ ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ, ಇವರನ್ನು ಸೇವೆಯಿಂದ ವಜಾಗೊಳಿಸಿದ ಶಿಸ್ತು ಪ್ರಾಧಿಕಾರದ ದಿನಾಂಕ:12-06-2000ರ ಆದೇಶವನ್ನು ರದ್ದುಪಡಿಸಿ, ಆ ದಿನಾಂಕದಿಂದಲೇ ಅವರು ಸೇವೆಯಲ್ಲಿ ಮುಂದುವರೆದಿದ್ದರು ಎಂಬಂತೆ ಪರಿಗಣಿಸಿ ದಿವಂಗತರ ಪತ್ನಿಶ್ರೀಮತಿ ಎಸ್. ಶಿವಮ್ಮ ಇವರಿಗೆ ಸರ್ಕಾರದಿಂದ ಸಿಗಬೇಕಾದ ನಿವೃತ್ತಿ ಸೌಲಭ್ಯಗಳು ಮತ್ತು ಕುಟುಂಬ ಪಿಂಚಣಿ, ಇತರೆ ಆರ್ಥಿಕ ಸೌಲಭ್ಯಗಳನ್ನು ನೀಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1107

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಕೆ.ವಿಶ್ವನಾಥನಾಯಕ್, ಆರ್‌ಪಿಐ, ದಂಡು ರೈಲ್ವೆ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೆ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/11/2005, ದಿನಾಂಕ:28-04-2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೆ, ಬೆಂಗಳೂರು ಇವರ ಆದೇಶ ಸಂಖ್ಯೆ: IGP/REYS/IRP/BNC/2005, ದಿನಾಂಕ:01-03-2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 01-06-2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/29/2006-07, ದಿನಾಂಕ:13-09-2006.

**ಪ್ರಸ್ತಾವನೆ:**

ಶ್ರೀ ಎಂ.ಕೆ.ವಿಶ್ವನಾಥ ನಾಯಕ್, ಆರ್‌ಪಿಐ, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು ಈ ಹಿಂದೆ ಪಿ.ಐ. ಆಗಿ ಶಹಬಾದ್ ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ್ಗೆ ಶಹಬಾದ್ ನಗರ ಠಾಣೆಯ ಪ್ರಕರಣ ಸಂ.84/2005, ಕಲಂ.498(ಎ) ಸಹ ಕಲಂ.34 ರಡಿಯಲ್ಲಿನ ಪ್ರಕರಣದ ತನಿಖಾಧಿಕಾರಿಯಾಗಿ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದರೂ ಸಹ ನ್ಯಾಯಾಲಯದಲ್ಲಿ ಸಾಕ್ಷಿಯನ್ನು ನುಡಿಯುವಾಗ್ಗೆ ಪ್ರತಿಕೂಲ ಸಾಕ್ಷಿಯನ್ನು ನುಡಿದು ನೀವು ನಿಮ್ಮ ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷತೆ ಮತ್ತು ಲೋಪವನ್ನು ಎಸಗಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೆ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:28-04-2005ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನಕ್ಕೆ ದಕ್ಕೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೆ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಲಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:01-03-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತನಿಖಾಧಿಕಾರಿಯಾಗಿದ್ದು, ನ್ಯಾಯಾಲಯದಲ್ಲಿ ಸಾಕ್ಷಿ ನುಡಿಯುವಾಗ ಆರೋಪಿಗೆ ಅನುಕೂಲವಾಗುವಂತೆ ಸಾಕ್ಷಿ ನುಡಿದಿರುವುದನ್ನು ಇಲಾಖೆ ಗಂಭೀರವಾಗಿ ಪರಿಗಣಿಸಿದೆ ಹಾಗೂ ಕರ್ತವ್ಯನಿರ್ವಹಣೆಯಲ್ಲಿ ನಿರ್ಲಕ್ಷತೆ ಮತ್ತು ಲೋಪ ಎಸಗಿರುತ್ತಾರೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 81 ಪೊಸಿಅ 2007 ಬೆಂಗಳೂರು, ದಿನಾಂಕ:19ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಕೆ.ವಿಶ್ವನಾಥನಾಯಕ್., ಆರ್‌ಪಿಐ, ರೈಲ್ವೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1065

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್ ಚಾಲಕ–20, ಕೇಂದ್ರ ದಳ, 8ನೆ ಪಡೆ, ಕೆಎಸ್‌ಆರ್‌ಪಿ, ಮಾಚೇನಹಳ್ಳಿ, ಶಿವಮೊಗ್ಗ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/14/2004–05, ದಿನಾಂಕ:31–08–2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/6/49/2004–05, ದಿನಾಂಕ:28–12–2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05–02–2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)42/2006, ದಿನಾಂಕ:14–11–2006.

**ಪ್ರಸ್ತಾವನೆ:**

ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್ ಚಾಲಕ–20, ಕೇಂದ್ರ ದಳ, 8ನೆ ಪಡೆ, ಕೆಎಸ್‌ಆರ್‌ಪಿ, ಮಾಚೇನಹಳ್ಳಿ, ಶಿವಮೊಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್, ಚಾಲಕ–20, ಕೇಂದ್ರ ದಳ (ವಾಹನ ವಿಭಾಗ) 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನೀವು ಘಟಕದ ವಾಹನ ಸಂ.ಸಿಎಜಿ–193ರ ಚಾಲಕರಾಗಿದ್ದು, ಸದರಿ ವಾಹನದಲ್ಲಿ ಘಟಕಕ್ಕೆ ಸಿಬ್ಬಂದಿಯವರ ತರಬೇತಿಗಾಗಿ ತರಬೇತಿಯ ಸಾಧನಗಳನ್ನು ನಿರ್ಮಿಸುವ ನಿಟ್ಟಿನಲ್ಲಿ ಅಗತ್ಯದ ಸಾಮಗ್ರಿಗಳನ್ನು ತರುವಂತೆ ಘಟಕದ 7 ಜನ ಸಿಬ್ಬಂದಿಯವರನ್ನು ನೇಮಿಸಿ ಕಳುಹಿಸಲಾಗಿದ್ದು, ದಿನಾಂಕ:09–02–2004ರಂದು ಸಾಯಂಕಾಲ ಸುಮಾರು 1730 ಗಂಟೆ ಸಮಯದಲ್ಲಿ ಮಾಚೇನಹಳ್ಳಿ ಹತ್ತಿರ ಬರುವಾಗ ಸಿಎಜಿ–193 ವಾಹನವನ್ನು ಅತಿವೇಗ ಹಾಗೂ ಅಜಾಗರೂಕತೆಯಿಂದ ಚಾಲನೆ ಮಾಡಿಕೊಂಡು ಬಂದು ಭದ್ರಾವತಿಯಿಂದ ಶಿವಮೊಗ್ಗ ಕಡೆಗೆ ಬರುತ್ತಿದ್ದ ಖಾಸಗಿ ವಾಹನ ಸಂ.ಕೆಎ–14 ಎಂ–4003 ಟಾಟಾ ಸುಮೊಕ್ಕೆ ಡಿಕ್ಕಿ ಹೊಡೆದ ಪರಿಣಾಮವಾಗಿ ಟಾಟಾ ಸುಮೋದಲ್ಲಿನ ಜನರಿಗೆ ಹಾಗೂ ಪೊಲೀಸ್ ವಾಹನದಲ್ಲಿದ್ದ ಸಿಬ್ಬಂದಿಗಳಿಗೆ ತೀವ್ರ ಪೆಟ್ಟು ಬಿದ್ದಿರುವುದಲ್ಲದೆ ಪೇದೆ ಸಂ.222, ಶ್ರೀ ಎನ್.ಅಂಕಯ್ಯ, ರವರು ಮೃತಪಟ್ಟಿರುತ್ತಾರೆ. ಈ ಸಂಬಂಧದಲ್ಲಿ ಖಾಸಗಿ ವಾಹನದ ಚಾಲಕ ಶ್ರೀ ಗುರುಮೂರ್ತಿ, ಇವರು ಶಿವಮೊಗ್ಗ ಜಿಲ್ಲಾ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದೂರು ನೀಡಿದ್ದು, ಅದರ ಆಧಾರದ ಮೇಲೆ ಸದರಿ ಠಾಣೆಯಲ್ಲಿ ಅಪರಾಧ ಸಂ.56/2004 ಕಲಂ 279, 337(ಎ) ಐಪಿಸಿ, ಪ್ರಕಾರ ಮೊಕದ್ದಮೆ ದಾಖಲಾಗಲು ಕಾರಣರಾಗಿ ತನ್ಮೂಲಕ ಬೇಜವಾಬ್ದಾರಿ, ಕರ್ತವ್ಯ ನಿರ್ಲಕ್ಷತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

2 " ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್ ಚಾಲಕ–20 ಕೇಂದ್ರ ದಳ (ವಾಹನ ವಿಭಾಗ) 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನೀವು, ನಿಮಗೆ ವಹಿಸಲಾಗಿದ್ದಮ ವಾಹನ ಸಂ.ಸಿಎಜಿ–193ಯನ್ನು ಅಜಾಗರೂಕತೆ ಹಾಗೂ ಬೇಜವಾಬ್ದಾರಿಯಿಂದ ಚಾಲನ ಮಾಡಿ ಎದುರುಗಡೆ ವಾಹನಕ್ಕೆ ಡಿಕ್ಕಿ ಹೊಡೆಸಿ ಅಪಘಾತಕ್ಕೀಡು ಮಾಡಿದ ಪರಿಣಾಮವಾಗಿ ಎರಡು ವಾಹನಗಳಲ್ಲಿ ಪ್ರಯಾಣಿಸುತ್ತಿದ್ದವರಿಗೆ ಗಾಯಗಳಾಗಿದ್ದು, ಒಬ್ಬ ಪೇದೆಯ ಸಾವು ಹಾಗೂ ವಾಹನ ಜಖಂಗೂ ಕಾರಣರಾದ ನೀವು ಕ್ರಿಮಿನಲ್ ಅಪರಾಧ ಪ್ರಕರಣದಲ್ಲಿ ಶಾಮೀಲಾಗಿ ತನ್ಮೂಲಕ ತೀವ್ರ ಕರ್ತವ್ಯ, ನಿರ್ಲಕ್ಷತೆ, ಬೇಜವಾಬ್ದಾರಿ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31–08–2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ನಾಲ್ಕು ವರ್ಷಗಳ ಕಾಲ ಮುಂದೂಡಲಾಗಿದೆ.

2) ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಾಹನ ಸಾರಿಗೆ ಶಾಖೆಯಿಂದ ತೆಗೆದುಹಾಕಲಾಗಿದೆ. ಪುನ: ಅವರನ್ನು ವಾಹನ ಸಾರಿಗೆ ಶಾಖೆಗೆ ನಿಯೋಜಿಸತಕ್ಕುದಲ್ಲ. ಅವರ ಉಳಿದ ಸೇವಾವಧಿಯಲ್ಲಿ ಸಾಮಾನ್ಯ ಕರ್ತವ್ಯವನ್ನು (General Duty) ಮಾತ್ರ ನಿರ್ವಹಿಸತಕ್ಕದ್ದು.

3) ಸದರಿಯವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

4) ಸದರಿಯವರ ಬೇಜವಾಬ್ದಾರಿತನದಿಂದ ಅಪಘಾತಕ್ಕೀಡಾದ ವಾಹನಕ್ಕೆ ಉಂಟಾದ ನಷ್ಟದ ಮೊತ್ತ ರೂ.30,500–00ಗಳನ್ನು ಸದರಿಯವರ ಸೆಪ್ಟೆಂಬರ್–2004ನೇ ತಿಂಗಳ ವೇತನದಿಂದ ಪ್ರಾರಂಭಿಸಿ ತಿಂಗಳಿಗೆ ರೂ.1,000,00ದಂತೆ ತಕ್ಷಣದಿಂದ ವಸೂಲಿ ಮಾಡಿ ಸರ್ಕಾರದ ಲೆಕ್ಕಕ್ಕೆ ಜಮಾ ಮಾಡತಕ್ಕದ್ದು.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ರವರು, ಮೇಲ್ಮನವಿದಾರರು ಇಲಾಖೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಹಾಗೂ ಈಗ ವಿಧಿಸಲಾಗಿರುವ ಶಿಕ್ಷೆಯು ಅವರ ಪಿಂಚಣಿ ಮತ್ತು ಇತರೆ ಸೌಲಭ್ಯಗಳ ಮೇಲೆ ಪ್ರಭಾವ ಬೀರವ ಕಾರಣದಿಂದ ಮಾನವೀಯತೆಯ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ಮಾರ್ಪಡಿಸಿ, ದಿನಾಂಕ:28–12–2005ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

1) ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್ ಚಾಲಕ–20 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ರವರ ವಾರ್ಷಿಕ ವೇತನ ಬಡ್ತಿಯನ್ನು ನಾಲ್ಕು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲಾಗಿದೆ.

2) ಸದರಿಯವರನ್ನು ವಾಹನ ಸಾರಿಗೆ ಶಾಖೆಯಿಂದ ತೆಗೆದುಹಾಕಲಾಗಿದೆ. ಪುನ: ಅವರನ್ನು ವಾಹನ ಸಾರಿಗೆ ಶಾಖೆಗೆ ನಿಯೋಜಿಸತಕ್ಕದ್ದಲ್ಲ. ಅವರ ಉಳಿದ ಸೇವಾವಧಿಯಲ್ಲಿ ಸಾಮಾನ್ಯ ಕರ್ತವ್ಯವನ್ನು ಮಾತ್ರ ನಿರ್ವಹಿಸತಕ್ಕದ್ದು.

3) ಸದರಿಯವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ವಿಮಾ ಕಂಪನಿ 10 ವರ್ಷಗಳ ಮೇಲ್ಪಟ್ಟ ವಾಹನಗಳಿಗೆ Third Party insurance ನೀಡುವ ಕಾರಣ, ವಾಹನದ ಒಟ್ಟು ಮೊತ್ತ ರೂ.30,500/–ಗಳನ್ನು ಭರಿಸುವುದಿಲ್ಲ. ಆದರೆ, ಅರ್ಜಿದಾರರೊಬ್ಬರಿಂದಲೇ ಇದನ್ನು ವಸೂಲಿ ಮಾಡುವುದು ನ್ಯಾಯವಾಗಿಲ್ಲವೆಂದು ತಿಳಿಸಿ, ಮಾನವೀಯ ದೃಷ್ಟಿಯಿಂದ ಮೂರನೇ ಒಂದು ಭಾಗ ಮೊತ್ತವನ್ನು ವಸೂಲು ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನಿರ್ಲಕ್ಷತನ, ಬೇಜವಾಬ್ದಾರಿತನದಿಂದ ವಾಹನ ಚಾಲನೆ ಮಾಡಿದ ಪರಿಣಾಮ ಒಬ್ಬ ಪೇದೆ ಮೃತ್ತ ಹೊಂದಲು ಕಾರಣವಾಗಿರುವ ಆರೋಪ ಸಾಬೀತಾಗಿರುತ್ತದೆ. ಹಾಗೂ ಇಲಾಖೆಯು ಗಂಭೀರವಾಗಿ ಪರಿಗಣಿಸಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಹಾಗೂ ಮೇಲ್ಮನವಿ ಪ್ರಾಧಿಕಾರಿಯವರು ದಂಡನೆಯನ್ನು ಮಾರ್ಪಾಡಿಸಿರುವುದರಿಂದ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 38 ಪೊಸಿಅ 2007 ಬೆಂಗಳೂರು, ದಿನಾಂಕ:26ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಆರ್.ಕೇಶವಮೂರ್ತಿ, ಹವಲ್ದಾರ್, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1037

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹೆಚ್.ಇ.ಮಂಜಪ್ಪ, ಪಿಎಸ್ಐ (ಕಾ ಮತ್ತು ಸು) ಟಿ.ನರಸೀಪುರ ಠಾಣೆ (ಹಾಲಿ ಹೊನ್ನಾಳಿ ಪೊಲೀಸ್ ಠಾಣೆ) ದಾವಣಗೆರೆ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಅಧೀಕ್ಷಕರು, ಮೈಸೂರು ಇವರ ಜ್ಞಾಪನ ಸಂಖ್ಯೆ:ಸಿಬ್ಬಂದಿ/32/2003–04, ದಿನಾಂಕ:31–01–2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು (ದ.ವ) ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು/43/2003–04, ದಿನಾಂಕ:10–09–2004.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21–07–2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)99/2005, ದಿನಾಂಕ:07–02–2007.

**ಪ್ರಸ್ತಾವನೆ:**

ಶ್ರೀ ಹೆಚ್.ಇ.ಮಂಜಪ್ಪ, ಪಿಎಸ್ಐ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 13ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಮೈಸೂರು ಇವರು ಶ್ರೀ ಹೆಚ್.ಇ. ಮಂಜಪ್ಪ, ಇವರು ಮೈಸೂರು ಜಿಲ್ಲೆಯಿಂದ ಚಾಮರಾಜನಗರ ಜಿಲ್ಲೆಗೆ ವರ್ಗಾವಣೆಯಾದಾಗ ಚಾಮರಾಜನಗರ ಜಿಲ್ಲೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ದಿನಾಂಕ:02–04–2003 ರಿಂದ 10–06–2003 ರವರೆಗೆ ಒಟ್ಟು 70 ದಿವಸಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣ ಈ ಗೈರು ಹಾಜರಿಯ ಅವಧಿಯನ್ನು ತಮ್ಮ ಜ್ಞಾಪನ ಸಂಖ್ಯೆ:ಸಿಬ್ಬಂದಿ:321:03, ದಿನಾಂಕ:31–01–2004ರಲ್ಲಿ ವೇತನ ರಹಿತ ರಜೆಯೆಂದು ಪರಿಗಣಿಸಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31–01–2004ರ ಜ್ಞಾಪನದಲ್ಲಿ ಅರ್ಜಿದಾರರಿಗೆ ದಿನಾಂಕ:02–04–2003 ರಿಂದ 10–06–2003ರ ವರೆಗಿನ 70 ದಿನಗಳ ಗೈರುಹಾಜರಿ ಅವಧಿಯನ್ನು ವೇತನ ರಹಿತ ರಜೆ ಎಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, (ದಕ್ಷಿಣ ವಲಯ) ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:10–09–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಅನಾರೋಗ್ಯದ ಕಾರಣದಿಂದ ರಜೆ ಹಾಕುವುದಿದ್ದಲ್ಲಿ ಮೊದಲೇ ಮೇಲಾಧಿಕಾರಿಗಳ ಅನುಮತಿಯನ್ನು ಕೋರಬಹುದಾಗಿತ್ತು. ಹಾಗೂ ಅರ್ಜಿದಾರರು ಅಧಿಕಾರಿ ಆಗಿದ್ದು, ವರ್ಗಾವಣೆಯಾದ ಸ್ಥಳದಲ್ಲಿ ವರದಿ ಮಾಡಿಕೊಳ್ಳದೆ ಕರ್ತವ್ಯ ನಿರ್ಲಕ್ಷತೆ ತೋರಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 158 ಪೊಸಿಅ 2006 ಬೆಂಗಳೂರು, ದಿನಾಂಕ:26ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಇ.ಮಂಜಪ್ಪ, ಪಿಎಸ್ಐ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1035

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ಗಂಗತಿಮ್ಮಕ್ಕ, ಪೂರ್ಣಕಾಲಿಕ ಜಾಡಮಾಲಿ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಅಡಳಿತ ಬೆಂಗಳೂರು ಇವರ ಆದೇಶ ಸಂಖ್ಯೆ:54/ ಡಿಇ/ಆರ್–6/12/ಸಿಡಿಸಿಎ/97, ದಿನಾಂಕ:29–04–2003.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ: 56/ಅಪೀಲು–2003–04, ದಿನಾಂಕ:20–01–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–04–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)56/2006–07, ದಿನಾಂಕ:21–11–2006.

**ಪ್ರಸ್ತಾವನೆ:**

ಶ್ರೀಮತಿ ಗಂಗತಿಮ್ಮಕ್ಕ, (ಪೂರ್ಣಕಾಲಿಕ ಜಾಡಮಾಲಿ) ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕೆ.ಸಿ.ಎಸ್.(ಸಿಸಿಎ) ನಿಯಮ 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. " ಶ್ರೀಮತಿ ಗಂಗತಿಮ್ಮಕ್ಕ ಆದ ನೀವು ಕರ್ನಾಟಕ ಸರ್ಕಾರಿ ನೌಕರರಾಗಿದ್ದು, ಅಶೋಕನಗರ ಪೊಲೀಸ್ ಠಾಣೆಯಲ್ಲಿ ಸ್ವೀಪರ್ ಎಂದು ಕೆಲಸ ಮಾಡುತ್ತಿದ್ದು, ನಿಮಗೆ ಸರ್ಕಾರಿ ವಸತಿ ಗೃಹ ನಂ.ಬಿ–25 ಬ್ಲಾಕ್ ಎಸ್ಎಫ್ 17, ನೀಲಸಂದ್ರ ಪೊಲೀಸ್ ವಸತಿ ಗೃಹ ಮಂಜೂರಾಗಿದ್ದು, ನೀವು ಸದರಿ ಸರ್ಕಾರಿ ವಸತಿ ಗೃಹವನ್ನು ದಿನಾಂಕ:01–02–2003ರಂದು ನಿಮ್ಮ ವಶಕ್ಕೆ ತೆಗೆದುಕೊಂಡಿದ್ದು, ಶ್ರೀಮತಿ ವಿಕ್ಟೋರಿಯಾ ಶ್ರೀಜಾನ್‌ರವರ ಪತ್ನಿ 8ನೇ ಬ್ಲಾಕ್ ಆನೇಪಾಳ್ಯ, ಬೆಂಗಳೂರು ನಗರ ಇವರಿಗೆ ತಿಂಗಳಿಗೆ 250 ರೂ. ನಂತೆ ಬಾಡಿಗೆಗೆ ಮೇಲಾಧಿಕಾರಿಗಳಿಗೆ ತಿಳಿಸದೆ ಮತ್ತು ನಿಮಗೆ ಸದರಿ ವಸತಿ ಗೃಹವನ್ನು ಶ್ರೀಮತಿ ವಿಕ್ಟೋರಿಯಾ ರವರಿಗೆ ಬಾಡಿಗೆಗೆ ಕೊಟ್ಟು ತೀವ್ರವಾದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

2. "ಶ್ರೀಮತಿ ಗಂಗತಿಮ್ಮಕ್ಕ ಆದ ನೀವು ಶ್ರೀಮತಿ ವಿಕ್ಟೋರಿಯಾ ರವರು ಸದರಿ ನಿಮಗೆ ಮಂಜೂರಾದ ವಸತಿ ಗೃಹವನ್ನು ಬಿಟ್ಟು ಬೇರೆ ಮನೆಗೆ ಹೋಗುತ್ತೇನೆಂದು ಹೇಳಿದ್ದಕ್ಕೆ ನೀವು ಅವರಿಂದ ರೂ.500–00ಗಳನ್ನು ಬೇಡಿ ಅವರು ಕೊಡುವುದಕ್ಕೆ ನಿರಾಕರಿಸಿದಾಗ ಅವರು ನಿಮ್ಮ ಮನೆಯಲ್ಲಿ ಇಟ್ಟಿದ್ದಂತಹ ಒಂದು ಅಲ್ಮೆರಾದಲ್ಲಿ ಅವರಿಗೆ ತಿಳಿಯದ ಹಾಗೆ ರೂ.1050–00ಗಳನ್ನು ಹಾಗೂ ಅವರ ಮನೆಯಲ್ಲಿದ್ದಂತಹ ಕೆಲವು ವಸ್ತುಗಳನ್ನು ಮಾರಾಟ ಮಾಡಿ ಅದರಿಂದ ಬಂದ ಹಣವನ್ನು ನಿಮ್ಮ ಸ್ವಂತಕ್ಕೆ ಉಪಯೋಗಿಸಿಕೊಂಡು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಆಡಳಿತ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29–04–2003ರ ಆದೇಶದಲ್ಲಿ ಅರ್ಜಿದಾರರನ್ನು ಅವರ ಹುದ್ದೆಯ ಕನಿಷ್ಟ ಮಟ್ಟಕ್ಕೆ 10 ವರ್ಷಗಳ ಕಾಲ ಇಳಿಸಲಾಗಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ. ಇದನ್ನು ಯಾವುದೇ ಕಾರಣಕ್ಕೂ ಕರ್ತವ್ಯವೆಂದು ಪರಿಗಣಿಸಲಾಗದು ಎಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಲಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20–01–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮಗೆ ನೀಡಿದ ಪೊಲೀಸ್ ವಸತಿ ಗೃಹವನ್ನು ಬೇರೆಯವರಿಗೆ ಬಾಡಿಗೆ ಕೊಟ್ಟಿರುವ ಬಗ್ಗೆ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುತ್ತದೆ. ಹಾಗೂ ಇದನ್ನು ದೃಢಪಡಿಸಲು ಕಾರಣ/ದಾಖಲೆಗಳನ್ನು ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 71 ಪೊಸಿಅ 2007 ಬೆಂಗಳೂರು, ದಿನಾಂಕ:26ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಗಂಗತಿಮ್ಮಕ್ಕ, (ಪೂರ್ಣಕಾಲಿಕ ಜಾಡಮಾಲಿ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1036

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ಬಿ.ಮಾಳೇದವರ, ಪಿಎಸ್ಐ, ಬೆಳಗಾವಿ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, (ಉವ) ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ/15/ಉವ/97–96, ದಿನಾಂಕ:04–07–1999.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17–03–2005.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)57/2005, ದಿನಾಂಕ:

**ಪ್ರಸ್ತಾವನೆ:**

ಶ್ರೀ ಆರ್.ಬಿ.ಮಾಳೇದವರ, ಪಿಎಸ್ಐ, ಬೆಳಗಾವಿ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

**"**ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಆರ್.ಬಿ.ಮಾಳೇದವರ, ಪಿಎಸ್ಐ, ಇವರು ಹುಕ್ಕೇರಿ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ದಿನಾಂಕ:28–06–94ರಂದು ಪಿರ್ಯಾದುದಾರ ಶ್ರೀ ರಾಮಪ್ಪ ಯಲ್ಲಪ್ಪ ಅಮ್ಮಿನಭಾವಿ ಮತ್ತು ಅವರ ಅಳಿಯನನ್ನು ಠಾಣೆಗೆ ಕರೆಯಿಸಿ, ಬೆದರಿಸಿ ಚಾಪ್ಟರ ಕೇಸು ಹಾಕುತ್ತೇನೆ ಅಂತಾ ಹೆದರಿಸಿ ಅವರಿಗೆ ರೂ.1000–00 ಹಣ ಕೊಟ್ಟರೆ ಬಿಡುವುದಾಗಿ ಹೇಳಿ ತಕ್ಷಣ ಅವರಿಂದ ರೂ.500–00ಗಳನ್ನು ಪಡೆದು ಉಳಿದ ಹಣ ರೂ.500–00ಗಳನ್ನು ದಿನಾಂಕ:04–07–94ರಂದು ಪಿರ್ಯಾದುದಾರರಿಂದ ಸಿಪಿಸಿ ನಂ.1978 ಶ್ರೀ ಸಿ.ಆರ್.ಕುರಣಿ, ಇವರಿಗೆ ತೆಗೆದುಕೊಳ್ಳಲು ಹೇಳಿ ನಂತರ ತಕ್ಷಣ ಸದರಿ ಪಿಸಿ ಯವರಿಂದ ಹಣ ಪಡೆದುಕೊಳ್ಳುತ್ತಿರುವಾಗ ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಪೊಲೀಸ್‌ರ ಬಲೆಗೆ ಸಿಕ್ಕು ನಿಮ್ಮ ಕರ್ತವ್ಯದಲ್ಲಿ ಘೋರ ಕರ್ತವ್ಯಲೋಪ ಪ್ರದರ್ಶಿಸಿರುವಿರಿ.**"**

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, (ಉವ) ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:04–07–1999ರ ಆದೇಶದಲ್ಲಿ ಅರ್ಜಿದಾರರ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಮುಂದಿನ ವೇತನ ಬಡ್ತಿಯ ಮೇಲೆ ಅನ್ವಯವಾಗುವಂತೆ ತಡೆಹಿಡಿಯಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಲಂಚ ಪಡೆಯಲು ಹಾಗೂ ಪಡೆದು ಪ್ರೋತ್ಸಾಹ ನೀಡಿರುವುದು ಇಲಾಖಾ ವಿಚಾರಣೆಯಲ್ಲಿ ಮತ್ತು ಮೂಲ ದಾಖಲೆಗಳಿಂದ ಸಾಬೀತಾಗಿರುತ್ತದೆ. ಇಂತಹ ಘೋರ ಕೃತ್ಯಕ್ಕಾಗಿ ಸೇವೆಯಿಂದ ವಜಾಗೊಳಿಸಬಹುದಾದ ಅಥವಾ ತೀವ್ರ ತರವಾದ ದಂಡನೆಯನ್ನು ವಿಧಿಸಬಹುದಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 341 ಪೊಸಿಅ 2005 ಬೆಂಗಳೂರು, ದಿನಾಂಕ:23ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಬಿ.ಮಾಳೇದವರ, ಪಿ.ಎಸ್.ಐ., ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.1034

**ವಿಷಯ:** ಶ್ರೀ ಎಸ್.ಬಿ.ಕಟ್ಟಿಮನಿ, ಸಿಪಿಐ, ಸುರಪುರ ಪೊಲೀಸ್ ಠಾಣೆ ರವರು, ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಉವ) ಬೆಳಗಾವಿ, ಇವರ ಆದೇಶ ಸಂಖ್ಯೆ:ಡಿಇ/66/ಎ/ಉವ/2005, ದಿನಾಂಕ:11–10–2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/8/75/ 2005–06, ದಿನಾಂಕ:16–06–2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17–01–2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/75/2005–06, ದಿನಾಂಕ:28–11–2006.

**ಪ್ರಸ್ತಾವನೆ:**

ಶ್ರೀ ಎಸ್.ಬಿ.ಕಟ್ಟಿಮನಿ, ಸಿಪಿಐ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ".ನೀವು ಶ್ರೀ ಎಸ್.ಬಿ.ಕಟ್ಟಿಮನಿ, ಸಿಪಿಐ, ಬ್ಯಾಡಗಿ ವೃತ್ತ ಮತ್ತು ಶ್ರೀ ಎಸ್.ಎಂ.ಅಂಗಡಿ, ಎ.ಎಸ್.ಐ. ಬ್ಯಾಡಗಿ ಠಾಣೆ ಕ್ರಮವಾಗಿ ಬ್ಯಾಡಗಿ ವೃತ್ತದಲ್ಲಿ ಹಾಗೂ ಠಾಣೆಯಲ್ಲಿ ಕರ್ತವ್ಯನಿರ್ವಹಿಸುತ್ತಿರುವಿರಿ."

"ನೀವು ಶ್ರೀ ಎಸ್.ಬಿ.ಕಟ್ಟಿಮನಿ, ಸಿಪಿಐ ಬ್ಯಾಡಗಿ ವೃತ್ತ ಬ್ಯಾಡಗಿ ಪೊಲೀಸ್ ಠಾಣೆಯ ಪ್ರಕರಣ ಸಂ.47/2003 ಕಲಂ 143, 147, 148, 302, ಸಹಕಲಂ 149 ಐಪಿಸಿ ನೇದ್ದರ ತನಿಖಾಧಿಕಾರಿಗಳಾಗಿದ್ದು, ಸದರಿ ಕೊಲೆ ಪ್ರಕರಣದ ತನಿಖೆಯನ್ನು ಕ್ರಮಬದ್ಧವಾಗಿ ಸಮಪರ್ಕವಾಗಿ ಮಾಡದೇ ಕರ್ತವ್ಯದಲ್ಲಿ ಈ ಕೆಳಗಿನಂತೆ ನಿರ್ಲಕ್ಷತನ, ದುರ್ನಡತೆ ಕರ್ತವ್ಯಚ್ಯುತಿ ಎಸಗಿರುವಿರಿ."

1. "ದಿನಾಂಕ:10–04–2003ರಂದು ಮೃತ ಸುಧೀರ ರಾಮಚಂದ್ರ ಕುರುಡೇಕರ ಸಾ:ಬೆಳಗಾವಿ ರವರ ಹೆಂಡತಿಯಾದ ಶ್ರೀಮತಿ ಸೋನಾ (ಸವಿತಾ) ರವರು ತಮ್ಮ ಗಂಡನ ಮರಣದಲ್ಲಿ ಭಾಗಿಯಾಗಿರುವರೆನ್ನಲಾದ ಅಭಿಜಿತ ಪೋತದಾರ ಸಾ:ಕಾಪಸೆ ಇವನ ಬಗ್ಗೆ ಸಂಶಯಪಟ್ಟು ತಿಳಿಸಲು ಬಂದಾಗ ಅದರಂತ ಮೃತನ ಅಣ್ಣ ಶ್ರೀಧರ ಇವರು ಸಹ ಅದೇ ವಿಷಯವನ್ನು ತಿಳಿಸಿ ಕ್ರಮಕೈಕೊಳ್ಳಲು ವಿನಂತಿಸಿದಾಗ ನೀವು ಆ ಬಗ್ಗೆ ಸರಿಯಾದ ಕ್ರಮ ಕೈಕೊಳ್ಳದೇ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ತೋರಿಸಿರುವಿರಿ."

2. "ಮೃತನ ಹೆಂಡತಿ ಶ್ರೀಮತಿ ಸೋನಾ (ಸವಿತಾ) ಹಾಗೂ ಮೃತನ ಅಣ್ಣ ಶ್ರೀ ಶ್ರೀಧರ ಇವರು ನಿಮಗೆ ಖುದ್ದಾಗಿ ಬೇಟಿಯಾಗಿ ಮೃತನು ಮನೆಯಿಂದ ಹೋಗುವಾಗ ಧರಿಸಿದ ಬಂಗಾರ ಒಡವೆ, ವಾಚ್ ಹೀಗೆ ರೂ.43,850=00 ಕಿಮ್ಮತ್ತಿನವು ಅಲ್ಲದೆ ಪೈನಾನ್ಸಕ್ಕೆ ತುಂಬಲು ಒಯ್ದು ರೂ.50,000=00 ನಗದು ಹಣ ಇವುಗಳನ್ನು ತಪಾಸ ಮಾಡಿ ಕೊಡಿಸಲು ವಿನಂತಿಸಿದ್ದರೂ ಆ ಬಗ್ಗೆ ನೀವು ಯಾವುದೇ ಕ್ರಮ ಜರುಗಿಸದೇ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ತೋರಿಸಿರುವಿರಿ."

3. "ದಿನಾಂಕ:13–04–2003ರಂದು ಮೃತನ ಅಣ್ಣ ಶ್ರೀಧರ ರಾಮಚಂದ್ರ ಕುರುಡೇಕರ ಇವರು ನಿಮಗೆ ಬೇಟಿಯಾಗಿ ತಿಳಿಸಿದ ಬಗ್ಗೆ ಸರಿಯಾಗಿ ತಪಾಸಣೆ ಮಾಡಲು ವಿನಂತಿಸಿದಾಗ ನೀವು ಕೇಸಿನ ತನಿಖೆಗೆ ಐದು ಸಾವಿರ ರೂಪಾಯಿ ಕೊಡಲೇಬೇಕು ಅಂತಾ ಒತ್ತಾಯಿಸಿ ಅವರಿಂದ ಐದು ಸಾವಿರ ರೂಪಾಯಿ ಅಕ್ರಮ ಸಂಭಾವನೆ ಪಡೆದುಕೊಂಡು ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ"

4. "ಬ್ಯಾಡಗಿ ಪೊಲೀಸ್ ಠಾಣೆ ಪ್ರಕರಣ ಸಂ.47/03, 147, 148, 302, ಸಹಕಲಂ 149 ಐಪಿಸಿ ನೇ ಪ್ರಕರಣದ ತಪಾಸಣೆ ಕುರಿತು ಆರಕ್ಷಕ ಉಪಾಧೀಕ್ಷಕರು, ಹಾವೇರಿ ಉಪ ವಿಭಾಗ ಇವರು ತಮ್ಮ ಕಾರ್ಯಾಲಯದ ಜ್ಞಾಪನ ಪತ್ರ ಸಂಖ್ಯೆ:1158/03 ದಿನಾಂಕ: 19–04–2003 ನೇದ್ದನ್ನು ನಿಮಗೆ ಕಳುಹಿಸಿ ಸದರಿ ಕೇಸಿನಲ್ಲಿ ತನಿಖೆಗಾಗಿ ಕೆಲವು ಸಲಹೆ ಸೂಚನೆಗಳನ್ನು ನೀಡಿದ್ದರೂ ಅವರು ನೀಡಿದ ಸಲಹೆ ಸೂಚನೆಗಳನ್ನು ಪಾಲಿಸದೇ ತನಿಖೆಯನ್ನು ಮಾಡಿದ್ದು, ಮೇಲಾಧಿಕಾರಿಗಳ ಸಲಹೆ ಸೂಚನೆಗಳನ್ನು ಉಲ್ಲಂಘಿಸಿ ನೀವು ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವಿರಿ"

5. "ಸದರಿ ಕೊಲೆ ಪ್ರಕರಣದ ತನಿಖೆಯಲ್ಲಿ ಮೃತನ ಹೆಂಡತಿ ಹಾಗೂ ಅವನ ರಕ್ತ ಸಂಬಂಧಿಗಳು ನಿಮಗೆ ಬೇಟಿಯಾಗಿ ಪ್ರಕರಣಕ್ಕೆ ಸಂಬಂಧಿಸಿದ ಕೆಲವು ಮಾಹಿತಿಗಳನ್ನು ಹೇಳಿದ್ದಾಗ್ಯೂ ನೀವು ಅವರ ಹೇಳಿಕೆಗಳನ್ನು ಪಡೆದುಕೊಳ್ಳದೇ ತನಿಖೆಯನ್ನು ಕ್ರಮ ಬದ್ಧವಾಗಿ ನಡೆಸದೇ ನೀವು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, (ಉವ) ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:11–10–2005ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರವಂತೆ ಒಂದು ವರ್ಷ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ. ಹಾಗೂ ಎರಡನೇ ಆರೋಪಿಯನ್ನು ದೋಷಮುಕ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:16.06.2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಾದ ನಿಮ್ಮ 5 ಆರೋಪ–ಗಳಲ್ಲಿ ಕ್ರಮಸಂಖ್ಯೆ 3ನ್ನು ಹೊರತುಪಡಿಸಿ, ಉಳಿದ 4 ಆಪಾದನೆಗಳು ಸಾಬೀತಾಗಿರುತ್ತವೆ. ಹಾಗೂ ಈ ಆರೋಪಗಳಿಗೆ ಕಡ್ಡಾಯ ನಿವೃತ್ತಿಗೆ ಅರ್ಹರಿದ್ದರೂ ಮಾನವೀಯತೆ ಹಾಗೂ ಅನುಕಂಪ ತೋರಿ ಲಘು ಶಿಕ್ಷೆ ವಿಧಿಸಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 89 ಪೊಸಿಅ 2007 ಬೆಂಗಳೂರು, ದಿನಾಂಕ:26ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಬಿ.ಕಟ್ಟಿಮನಿ, ಸಿಪಿಐ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1012

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಸಿ.ಪುಟ್ಟಣ್ಣನವರ್, ಡಿ.ಎಸ್.ಪಿ. ರವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**

(1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 4 ಪಿಇಜಿ 90, ದಿನಾಂಕ 15–10–1992.

(2) ಡಿಜಿಪಿ ಹಾಗೂ ಐಜಿಪಿಯವರ ಪತ್ರ ಸಂಖ್ಯೆ.ಸಿಬಿ/ 94/88–89 ದಿನಾಂಕ 15–09–1993.

(3) ಡಿಜಿಪಿ ಹಾಗೂ ಐಜಿಪಿಯವರ ಪತ್ರ ಸಂಖ್ಯೆ.ಸಿಬಿ/5/ 94/88–89 ದಿನಾಂಕ 13–12–1995.

(4) ಸಮಾಜ ಕಲ್ಯಾಣ ಇಲಾಖೆಯ ಅ.ಟಿ.ಸಂಖ್ಯೆ.ಸಕಇ 43 ಎಸ್ಎಡಿ 97 ದಿನಾಂಕ 24–06–97.

(5) ಸರ್ಕಾರದ ಸಮ ಸಂಖ್ಯೆ ಪತ್ರ ದಿನಾಂಕ 15–07–97.

(6) ತಹಶೀಲ್ದಾರ್, ಹಾವೇರಿ ಪತ್ರ ಸಂಖ್ಯೆ:ಎಂಐಎಸ್‌ಸಿ:ಸಿಆರ್:8:97–98 ದಿನಾಂಕ 8–9–97.

(7) ಶ್ರೀ ಬಿ.ಸಿ.ಪುಟ್ಟಣ್ಣನವರ್, ಡಿ.ಎಸ್.ಪಿ. ಇವರ ಮನವಿ ದಿನಾಂಕ 12–10–2004.

(8) ಡಿಜಿಪಿರವರ ಪತ್ರ ಸಂಖ್ಯೆ:ವಿವೇಶಾ(1)/21/00–01, ದಿನಾಂಕ 24–12–2004.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಪುಟ್ಟಣ್ಣನವರ್, ಡಿವೈ.ಎಸ್.ಪಿ. ಇವರು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಪಡೆದು ಎಸ್.ಟಿ.ವರ್ಗದ ಮೀಸಲಾತಿಯ ಸೌಲಭ್ಯಗಳು ದುರುಪಯೋಗ ಮಾಡಿರುವ ಹಾಗೂ ಸರ್ಕಾರಕ್ಕೆ ಮೋಸ ಮಾಡಿರುವ ಆಪಾದನೆ ಮೇರೆಗೆ ಶ್ರೀಯುತರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.)ನಿಯಮಗಳು, 1965 ರ ನಿಯಮ–6 ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಅಡಿಷನಲ್ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಬಳ್ಳಾರಿ, ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ಆರೋಪಿತರು ತಮ್ಮ ಅಂತಿಮ ಲಿಖಿತ ಹೇಳಿಕೆಯೊ0ದಿಗೆ ಸಲ್ಲಿಸಿರುವ ನ್ಯಾಯಾಲಯಗಳ ತೀರ್ಪುಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ, ಗಂಗಮತ ಜಾತಿಯು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿರದಿದ್ದರೂ, ಕೋಳಿ ವರ್ಗದ ಪರ್ಯಾಯ ಶಬ್ದವನ್ನಾಗಿ ಪರಿಗಣಿಸಿ, ಅದಕ್ಕೆ ಎಸ್.ಟಿ. ವರ್ಗದ ಸೌಲಭ್ಯವನ್ನು ಪಡೆದಿರುವುದು ಅಕ್ರಮವಲ್ಲವೆಂದೂ, ಆರೋಪಿತರ ವಿರುದ್ಧ ಮಾಡಿರುವ ಆಪಾದನೆಯು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆಂದು ಮೇಲೆ ಓದಲಾದ(2)ರ ಪತ್ರದಲ್ಲಿ ಡಿಜಿ ರವರು ತಿಳಿಸಿರುತ್ತಾರೆ. ಈ ಇಲಾಖಾ ವಿಚಾರಣೆಯನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಸಿ.ಆರ್.ಇ. ಸೆಲ್ ವರದಿಯನ್ನು ಅನುಸರಿಸಿ ಆದೇಶಮಾಡಿರುವುದರಿಂದ ಗಂಗಮತ ಜಾತಿಯು ಕೋಳಿವರ್ಗದ ಪರ್ಯಾಯ ಶಬ್ದವನ್ನಾಗಿ ಪರಿಗಣಿಸಿರುವ ಬಗ್ಗೆ ಸರ್ಕಾರವೇ ನಿರ್ದಿಷ್ಟ ಅಭಿಪ್ರಾಯ ನೀಡಬೇಕೆ0ದು ದಿನಾಂಕ 15–9–1993 ರ ಪತ್ರದಲ್ಲಿ ತಿಳಿಸಿರುತ್ತಾರೆ. ಡಿ.ಜಿ. ಮತ್ತು ಐಜಿಪಿ ರವರು ಇಲಾಖಾ ವಿಚಾರಣಾ ದಾಖಲಾತಿಗಳನ್ನು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಡಿ.ಸಿ.ಆರ್.ಇ., ಬೆಂಗಳೂರು, ಇವರಿಗೆ ಕಳುಹಿಸಿ, ಅಭಿಪ್ರಾಯವನ್ನು ತಿಳಿಸಲು ಕೋರಿರುತ್ತಾರೆ.

ದಿನಾಂಕ 10-10-1995 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ 18012/89 ರಲ್ಲಿ ದಿನಾಂಕ 21-1-1995 ರಂದು ಆದೇಶಿಸಿದಂತೆ ಜಾತಿ ವಿಚಾರಣೆಯನ್ನು ರಾಜ್ಯ ಮಟ್ಟದ ಜಾತಿ ಪರಿಶೀಲನಾ ಸಮಿತಿಗೆ ಒಳಪಡಿಸಿ, ಅವರಿಂದ ಅಂತಿಮ ನಿರ್ಣಯ ತೆಗೆದುಕೊಳ್ಳಬೇಕಾಗುತ್ತದೆಂದು ಡಿಜಿ ಮತ್ತು ಐಜಿಪಿ ರವರು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಸರ್ಕಾರವು ಈ ಪ್ರಕರಣವನ್ನು ರಾಜ್ಯ ಮಟ್ಟದ ಜಾತಿ ಪರಿಶೀಲನಾ ಸಮಿತಿಗೆ ಒಳಪಡಿಸಲು ಮೇಲೆ ಓದಲಾದ(5)ರ ಪತ್ರದಲ್ಲಿ ತಿಳಿಸಿದೆ. ಶ್ರೀ ಬಿ.ಸಿ.ಪುಟ್ಟಣ್ಣನವರ್ ಕೋಳಿ ಜನಾಂಗಕ್ಕೆ ಸೇರಿಲ್ಲವೆಂದು ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯವು ಸ್ಪಷ್ಟ ಅಭಿಪ್ರಾಯ ನೀಡಿರುವುದರ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯು ಮೇಲೆ ಓದಲಾದ (4)ರ ಅನಧಿಕೃತ ಟಿಪ್ಪಣಿಯಲ್ಲಿ ತಿಳಿಸಿದ್ದು ತಹಶೀಲ್ದಾರ್, ಹಾವೇರಿ ರವರು ನೀಡಿದ ಜಾತಿ ದೃಢೀಕರಣ ಪತ್ರವನ್ನು ರದ್ದುಗೊಳಿಸಲು ತಹಶೀಲ್ದಾರ್‌ರವರನ್ನು ಕೋರುವಂತೆ ಡಿಜಿ ಮತ್ತು ಐಜಿಪಿ ರವರಿಗೆ ಪತ್ರ ಬರೆಯಲಾಗಿತ್ತು. ಮೇಲೆ ಓದಲಾದ(6)ರ ಪತ್ರದಲ್ಲಿ ತಹಶೀಲ್ದಾರ್ ರವರ ಕಾರ್ಯಾಲಯವು ಕೋಳಿ ಜನಾಂಗಕ್ಕೆ ಸೇರಿದ ಪರಿಶಿಷ್ಟ ಪಂಗಡ ಜಾತಿ ಪ್ರಮಾಣ ಪತ್ರವನ್ನು ರದ್ದುಗೊಳಿಸಿರುತ್ತಾರೆಂದು ತಿಳಿಸಿದ್ದರಿಂದ ಸದರಿಯವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 4501/97 ನ್ನು ದಾಖಲಿಸಿರುತ್ತಾರೆ. ನ್ಯಾಯಾಲಯವು ಪರಿಶೀಲಿಸಿ ದಿನಾಂಕ 03-03-2006ರಂದು ಈ ಕೆಳಗಿನ0ತೆ ಆದೇಶಿಸಿದೆ:-

``1. Enquiries pending before various Departments, Verification Committee, Appellate Authorities, CRE Cell and other authorities stands abated or dropped;

2. Action shall be taken to withdraw the case filed before any Court;

3. Suspension Orders if any in such cases stands revoked.

4. Pensionary benefits that are withheld shall be released.

3. The Competent Authority to issue Caste Certificate shall independently verify each case before issuing a certificate and shall not issue a certificate merely because the father/brother or any relative of the person holds a certificate as belonging to a particular community.

4. The appointments already made in respect of the persons belonging to Pariwara, Talwar, Maaleru, Kuruba, Besta and Koli communities who have obtained employment under ST quota (as Nayaka, Maaleru, Kadu Kuruba, Jenu Kuruba, Gond, Rajgond, Kohidhor and Tokrikoli) shall be treated as appointments under GM category w.e.f. the date of this order. They shall not be eligible for any promotion or any other benefits as STs in future. However, they could claim benefits under the respective category of Backward Classes to which they belong as per the existing Government Order``.

ಕೆ.ಎ.ಟಿ.ಯು ಅರ್ಜಿ ಸಂಖ್ಯೆ: 4501/ 97 ದಿನಾಂಕ:03.03.2006ರ ತೀರ್ಪಿನಲ್ಲಿ ದಿನಾಂಕ:11.03.2002ರಲ್ಲಿ ಸರ್ಕಾರವು ಹೊರಡಿಸಿರುವ ಆದೇಶದನ್ವಯ ಕೆಲವು ಜಾತಿಗಳಿಗೆ ಸೇರಿದ ವ್ಯಕ್ತಿಗಳು ಎಸ್.ಟಿ. ಕೋಟಾದಲ್ಲಿ ಪ್ರಮಾಣ ಪತ್ರ ಮುಂಬಡ್ತಿ ಪಡೆದು ಆ ವರ್ಗಕ್ಕೆ ದೊರಕುವ ನೇಮಕಾತಿ ಇತ್ಯಾದಿ ಸೌಲಭ್ಯಗಳನ್ನು ಪಡೆದುದಾಗಿ ದಿನಾಂಕ:11.03.2002 ತಿಂಗಳ ನಂತರ ಅವರುಗಳನ್ನು ಸಾಮಾನ್ಯ ವರ್ಗವೆಂದು ಪರಿಗಣಿಸಿತು. ಶ್ರೀ ಬಿ.ಸಿ. ಪುಟ್ಟಣ್ಣನವರ್, ವಿರುದ್ಧ ತಡೆಹಿಡಿದಿರುವ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡುವ ಬಗ್ಗೆ ಇರುವ ಮಾರ್ಗದರ್ಶನವನ್ನು ಉಲ್ಲೇಖಿಸಿ ಅರ್ಜಿಯನ್ನು ವಜಾಗೊಳಿಸಿದೆ.

ಈ ಪ್ರಕರಣದ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆದು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 171 ಪೊಸಿಪ 2002, ಬೆಂಗಳೂರು, ದಿನಾಂಕ:13ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಸಿ. ಪುಟ್ಟಣ್ಣನವರ್, ಡಿಎಸ್‌ಪಿ (ನಿವೃತ್ತ) ಇವರ ವಿರುದ್ಧ ಹೂಡಿದ್ದ ಇಲಾಖಾ ವಿಚಾರಣೆಯಿಂದ ಇವರನ್ನು ದೋಷಮುಕ್ತಗೊಳಿಸಲಾಗಿದೆ ಹಾಗೂ ತಡೆಹಿಡಿಯಲಾಗಿದ್ದ ಇವರ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.1088

**ವಿಷಯ:** ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 322/ 05ರ ತನಿಖೆಯಲ್ಲಿ ಲೋಪವೆಸಗಿದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರಸಂಖ್ಯೆ: ಸಿಬಿ (5) 20/ 2006-07 ದಿನಾಂಕ:13.02.2007.

**ಪ್ರಸ್ತಾವನೆ:**

ದಿನಾಂಕ: 13.06.2005ರಂದು ಶ್ರೀಮತಿ ಮಂಜಮ್ಮರವರು ಚಿತ್ರದುರ್ಗ ಗ್ರಾಮಾಂತರ ಜಿಲ್ಲೆ ಪೊಲೀಸ್ ಠಾಣೆಗೆ ದೂರು ನೀಡಿ ತನ್ನ ಅಕ್ಕನ ಮಗಳು ಶ್ರೀಮತಿ ಗೌರಮ್ಮ ಹಾಗೂ ಅವಳ ಗಂಡ ಶ್ರೀ ಗೋವಿಂದರಾಜು, ಪಿ.ಯು.ಡಿ., ಲೇಔಟ್‌ನಲ್ಲಿ ವಾಸವಾಗಿದ್ದು ಸುಮಾರು 1 ಗಂಟೆ ಸಮಯದಲ್ಲಿ ಗೌರಮ್ಮಳು ನೇಣು ಹಾಕಿಕೊಂಡಿರುತ್ತಾಳೆಂದು, ಆಸ್ಪತ್ರೆಗೆ ಸೇರಿಸುತ್ತಿರುವಾಗ ಮೃತಪಟ್ಟಿರುತ್ತಾಳೆಂದು ಈ ಕುರಿತು ತನಿಖೆ ಮಾಡುವಂತೆ ದೂರು ಸಲ್ಲಿಸಿರುತ್ತಾರೆ. ಈ ಪ್ರಕರಣ ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 322/ 05 ಕಲಂ 498 (ಎ) 506, 304(ಬಿ), 34 ಐ.ಪಿ.ಎಸ್. ಮತ್ತು 3, 4 ಹಾಗೂ 6ರ ಡಿ.ಪಿ. ಕಾಯ್ದೆ ಅಡಿಯಲ್ಲಿ ಪೊಲೀಸ್ ಅಧಿಕಾರಿಗಳಾದ ಶ್ರೀ ಬಿ.ಎನ್. ನೀಲಗಾರ, ಡಿವೈ.ಎಸ್.ಪಿ. ಚಿತ್ರದುರ್ಗ, ಶ್ರೀ ಕವಳಪ್ಪ, ಸಿ.ಪಿ.ಐ. ಮತ್ತು ಶ್ರೀ ರೋಷನ್ ಜಮೀರ್, ಪಿ.ಎಸ್.ಐ. ಇವರುಗಳು ತನಿಖೆ ಮಾಡದೆ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965/ 89ರ ನಿಯಮ 6 ಉಪ ನಿಯಮ (2) ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲು ಹಾಗೂ ಈ ಇಲಾಖಾ ವಿಚಾರಣೆ ನಡೆಸಲು ಡಿ.ಐ.ಜಿ.ಪಿ., ಅರಣ್ಯ ಘಟಕ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿ ಮೇಲೆ ಓದಲಾದ ಉಲ್ಲೇಖಿತ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 117 ಪೊಸಿಪ 2007, ಬೆಂಗಳೂರು, ದಿನಾಂಕ:14ನೇ ಜೂನ್, 2007**

ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆ ಸಂಖ್ಯೆ: 322/ 05 ಕಲಂ 498 (ಎ) 506, 304 (ಬಿ) ಸಹ ಕಲಂ 34 ಐ.ಪಿ.ಸಿ. ಮತ್ತು 3, 4 ಹಾಗೂ 6 ರ ಡಿ.ಪಿ. ಆ್ಯಕ್ಟ್ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೆ ಲೋಪವೆಸಗಿರುವ ಆಪಾದಿತ ಪೊಲೀಸ್ ಅಧಿಕಾರಿಗಳಾದ ಶ್ರೀ ಬಿ.ಎನ್. ನೀಲಗಾರ, ಡಿವೈ.ಎಸ್.ಪಿ. ಚಿತ್ರದುರ್ಗ ಉಪವಿಭಾಗ, ಶ್ರೀ ಕವಳಪ್ಪ, ಸಿ.ಪಿ.ಐ. ಚಿತ್ರದುರ್ಗ ಮತ್ತು ಶ್ರೀ ರೋಷನ್ ಜಮೀರ್, ಪಿ.ಎಸ್.ಐ. ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆ ರವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965/ 89ರ ನಿಯಮ 6 ಉಪ ನಿಯಮ (2) ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿದೆ. ಈ ವಿಚಾರಣೆಯನ್ನು ನಡೆಸಲು ಡಿ.ಐ.ಜಿ.ಪಿ. ಅರಣ್ಯ ಘಟಕ, ಬೆಂಗಳೂರು ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ಮಾಡಿ 3 ತಿಂಗಳೊಳಗೆ ಅಂತಿಮ ವರದಿಯನ್ನು ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.1123

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ಆರ್. ಚಂದ್ರಶೇಖರ್, ಪಿಎಸ್‌ಐ, ಚಿಕ್ಕಮಗಳೂರು ಜಿಲ್ಲೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ (ಪ.ವ.) ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/ ಇವಿ/2004-05, ದಿನಾಂಕ:27-09-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/ 6/ 42/ 04-05, ದಿನಾಂಕ:11-03-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-10-2005.

4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು / 2/ 144/ 2005, ದಿನಾಂಕ:24.07.2006.

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 33 ಸಿಎನ್‌ಎಸ್ 2007, ದಿನಾಂಕ:29.05.2007.

**ಪ್ರಸ್ತಾವನೆ:**

ಶ್ರೀ ಎ.ಆರ್. ಚಂದ್ರಶೇಖರ್, ಪಿಎಸ್‌ಐ, ಚಿಕ್ಕಮಗಳೂರು ಇವರ ವಿರುದ್ಧ (ಇ ಮು ಅ ಕ ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1) ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಎ.ಆರ್. ಚಂದ್ರಶೇಖರ್, ಪಿಎಸ್‌ಐ ಆದ ನೀವು ಈ ಹಿಂದೆ ಚಿಕ್ಕಮಗಳೂರು ನಗರ ಪೊಲೀಸ್ ಠಾಣೆಯಲ್ಲಿ ದಿನಾಂಕ:04.07.2002 ರಿಂದ ಅಪರಾದ ವಿಭಾಗದ ಪ್ರಭಾರದಲ್ಲಿದ್ದು,

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** M/s Sidhi Shree Shive Powers Ltd. ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ/06/ಕೊಲ್ಲೂರು/2006/2392 ದಿನಾಂಕ: 21.11.2006.

2. ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sidhi Shree Shive Powers Ltd. ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಜನ್ನನೆ ಗ್ರಾಮದ ಬಳಿ ಸೌಪರ್ಣಿಕ/ಕೊಲ್ಲೂರು ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 5 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 452 ಎನ್‌ಸಿಇ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2007**

M/s Sidhi Shree Shive Powers Ltd. ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಜನ್ನನೆ ಗ್ರಾಮದ ಬಳಿ ಸೌಪರ್ಣಿಕ/ಕೊಲ್ಲೂರು ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗಳಿಂದ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದರ೦ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** M/s Sattva Energy Private Limited ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪ್ಲಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ: ಕೆಆರ್‌ಇಡಿ/06 /ಸಂಪ್ಲಾಡಿ/2006/2488 ದಿನಾಂಕ: 27.11.2006/18.12.2006.

2. ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sattva Energy Private Limited ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಸಂಪ್ಲಾಡಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪ್ಲಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 12 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 492 ಎನ್‌ಸಿಇ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2007**

ಸರ್ಕಾರವು M/s Sattva Energy Private Limited ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಸಂಪ್ಲಾಡಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪ್ಲಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗಳಿಂದ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ೦ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** M/s S.M. Power Projects Pvt. Ltd. ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ರಂಗನಾಥಸ್ವಾಮಿ–2/2006/2619 ದಿನಾಂಕ: 29.12.2006.

2. ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s S.M. Power Projects Pvt. Ltd. ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರ ಗ್ರಾಮದ ಹತ್ತಿರ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 20 ರಲ್ಲಿ ಶಿಫಾರಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 511 ಎನ್‌ಸಿಇ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2007**

ಸರ್ಕಾರವು M/s S.M. Power Projects Pvt. Ltd. ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರ ಗ್ರಾಮದ ಹತ್ತಿರ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗಳಿಂದ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.516

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:–** ಕೊಡಗು ಜಿಲ್ಲೆ ಕೂಡಿಗೆಯಲ್ಲಿ "ಸೈನಿಕ ಶಾಲೆ ಕೊಡಗು"ವನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 94 ಎಂಹೆಚ್ಎಸ್ 62 ಬೆಂಗಳೂರು ದಿನಾಂಕ: 19–04–1963
2. ಕೇಂದ್ರ ಸರ್ಕಾರದ ಸೈನಿಕ ಶಾಲೆ ಸೊಸೈಟಿಯ ಪತ್ರ ಸಂಖ್ಯೆ: ಡಿಓ ನಂ.18/2/98/ಡಿ (ಎಸ್ಎಸ್ಸಿ) ದಿನಾಂಕ: 05–08–1998
3. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಇಡಿ 10 ಸಿಎಸ್‌ಬಿ2004, ಬೆಂಗಳೂರು ದಿನಾಂಕ: 27.10.2005.
4. ಜಿಲ್ಲಾಧಿಕಾರಿಗಳು, ಕೊಡಗು ರವರ ಆದೇಶ ಸಂಖ್ಯೆ: ಜಾಗ (2)/22 /2004–05 ದಿನಾಂಕ: 20.04.2006 & 05.01.2007
5. ಕೇಂದ್ರ ಸರ್ಕಾರದ ರಕ್ಷಣಾ ಮಂತ್ರಾಲಯ ಸೈನಿಕ ಸ್ಕೂಲ್‌ರವರ ಪತ್ರ ಸಂಖ್ಯೆ: 32 (41) 2005 ಡಿಎಸ್ಎಸ್ಸಿ ದಿನಾಂಕ 07–09–2006 & 28–12–2006.
6. ಸರ್ಕಾರದ ಪತ್ರ ಸಂಖ್ಯೆ: ಇಡಿ 10 ಸಿಎಸ್‌ಬಿ 2004 ದಿನಾಂಕ 06–07–2007
7. ಆರ್ಥಿಕ ಇಲಾಖೆಯ ದಿನಾಂಕ 16–08–2007ರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2007

**ಪ್ರಸ್ತಾವನೆ :–**

1) ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಂತೆ, ಬಿಜಾಪುರದಲ್ಲಿ ಒಂದು ಸೈನಿಕ ಶಾಲೆಯನ್ನು ಪ್ರಾರಂಭಿಸಿ 1963 ರಿಂದ ನಡೆಸಲಾಗುತ್ತಿದೆ.

2) ಈ ಶಾಲೆಗೆ ರಾಜ್ಯ ಸರ್ಕಾರದಿಂದ ಮತ್ತು ಕೇಂದ್ರ ಸರ್ಕಾರದಿಂದ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ. ರಾಜ್ಯದ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿರುವುದರಿಂದ ವಿದ್ಯಾರ್ಥಿ ವೇತನ, ಆಹಾರ ಭತ್ಯೆ ಮತ್ತು ಸಮವಸ್ತ್ರ ಭತ್ಯೆಯನ್ನು ಅಗತ್ಯತೆಗೆ ತಕ್ಕಂತೆ ರಾಜ್ಯ ಸರ್ಕಾರ ಭರಿಸುತ್ತಾ ಬಂದಿದೆ.

3) ಮೇಲೆ (2)ರಲ್ಲಿ ಓದಲಾದ ಕೇಂದ್ರ ಸರ್ಕಾರದ ರಕ್ಷಣಾ ಮಂತ್ರಾಲಯದ ಅಧೀನದಲ್ಲಿ ಬರುವ ಸೈನಿಕ ಶಾಲಾ ಸೊಸೈಟಿಯ ಜಂಟಿ ಕಾರ್ಯದರ್ಶಿ (Training & CAO) ರವರು ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ಎಲ್ಲಾ ರಾಜ್ಯಗಳಲ್ಲಿ ಒಂದೊಂದು ಸೈನಿಕ ಶಾಲೆ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿದೆ. ರಾಷ್ಟ್ರದ ಜನ ಸಂಖ್ಯೆಯ ಶೇ.5ಕ್ಕಿಂತ ಹೆಚ್ಚು ಜನ ಸಂಖ್ಯೆ ಇರುವ ರಾಜ್ಯಗಳಲ್ಲಿ ರಕ್ಷಣಾ ಸೇವೆಯಲ್ಲಿನ ಪ್ರಾದೇಶಿಕ ಅಸಮತೋಲನವನ್ನು ತೊಡೆದು ಹಾಕುವ ದೃಷ್ಟಿಯಿಂದ ಒಂದೊಂದು ಹೆಚ್ಚುವರಿ ಸೈನಿಕ ಶಾಲೆಯನ್ನು ತೆರೆಯಬೇಕೆಂಬ ತೀರ್ಮಾನವನ್ನು ಪರಿಗಣಿಸುವುದು ಸೂಕ್ತವಾಗಿದೆ ಎಂದು ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದಾಗ, ನಮ್ಮ ರಾಜ್ಯದಲ್ಲಿ ಮೂರು ರಕ್ಷಣಾ ಸೇವೆಗಳಾದ, ಭೂದಳ, ವಾಯುದಳ ಮತ್ತು ಜಲದಳ ಇವುಗಳಲ್ಲಿ ಪ್ರಾದೇಶಿಕ ಅಧಿಕಾರಿಗಳ ಸಂಖ್ಯೆ ತುಂಬಾ ಕಡಿಮೆ ಇರುವುದರಿಂದ, ನಮ್ಮ ರಾಜ್ಯದ ಪ್ರಾದೇಶಿಕ ಅಸಮತೋಲನವನ್ನು ತೊಡೆದು ಹಾಕುವ ದೃಷ್ಟಿಯಿಂದ ಒಂದು ಹೆಚ್ಚುವರಿ ಸೈನಿಕ ಶಾಲೆಯನ್ನು ಈಗಾಗಲೇ ಇರುವ ಬಿಜಾಪುರ ಸೈನಿಕ ಶಾಲೆ ಜೊತೆಗೆ ಇನ್ನೊಂದು ಸೈನಿಕ ಶಾಲೆಯನ್ನು ರಾಜ್ಯದಲ್ಲಿ ತೆರೆಯಲು ತೀರ್ಮಾನಿಸಲಾಗಿದೆ. ಈ ಬಗ್ಗೆ ಸೂಕ್ತ ಸ್ಥಳವನ್ನು ಆಯ್ಕೆ ಮಾಡಲು ರಾಜ್ಯ ಸರ್ಕಾರವು ಪರಿಶೀಲಿಸಿದಾಗ, ಕೊಡಗು ಜಿಲ್ಲೆಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಗಳಿದ್ದು, ಮೇಜರ್ ಜನರಲ್ ತಿಮ್ಮಯ್ಯ ಮತ್ತು ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಅವರು ಜನಿಸಿದ ಕೊಡಗಿನಲ್ಲಿ ಸೈನಿಕ ಶಾಲೆಯನ್ನು ಪ್ರಾರಂಭಿಸುವುದು ಭೌಗೋಳಿಕವಾಗಿ, ಶೈಕ್ಷಣಿಕವಾಗಿ ಹಾಗೂ ಐತಿಹಾಸಿಕವಾಗಿ ಸೂಕ್ತವಾಗಿರುತ್ತದೆಯೆಂದು ತೀರ್ಮಾನಿಸಿದೆ.

4) ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 27–10–2005ರ ಸರ್ಕಾರದ ಆದೇಶದಂತೆ, ಕೊಡಗು ಜಿಲ್ಲೆಯ ಸೋಮವಾರ ಪೇಟೆ ತಾಲ್ಲೂಕಿನ ಕೃಷಿ ಇಲಾಖೆಯ ಅಧೀನದಲ್ಲಿ ಬರುವ ಜಿಲ್ಲಾ ಕೃಷಿ ತರಬೇತಿ ಕೇಂದ್ರದಲ್ಲಿ ಲಭ್ಯವಿರುವ 55.93 ಎಕರೆ ಜಮೀನಿನಲ್ಲಿರುವ (ಬಸವತ್ತೂರು ಗ್ರಾಮದ ವ್ಯಾಪ್ತಿಯಲ್ಲಿ 19 ಎಕರೆ ಹಾಗೂ ಚಿಕ್ಕತ್ತೂರು ಗ್ರಾಮದ ವ್ಯಾಪ್ತಿಯಲ್ಲಿ 36.93 ಎಕರೆ) ಸ್ಥಳವನ್ನು ಈ ಹಿಂದೆ ಅಧೀನದಲ್ಲಿದ್ದ ಕೃಷಿ ಇಲಾಖೆಯಿಂದ ಹಸ್ತಾಂತರ ಮಾಡಿಕೊಂಡು, ಉದ್ದೇಶಿತ ಸೈನಿಕ ಶಾಲೆಯನ್ನು ಪ್ರಾರಂಭಿಸಲು ಆದೇಶ ಹೊರಡಿಸಲಾಗಿದೆ.

5) ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರ ಆದೇಶ ಸಂಖ್ಯೆ: ಜಾಗ (2)/22 /2004–05 ದಿನಾಂಕ: 20–04–2006 & 05–01–2007 ರನ್ವಯ ಸೈನಿಕ ಶಾಲೆ ಪ್ರಾರಂಭಿಸಲು ಒಟ್ಟು 55.93 ಎಕರೆ ಜಮೀನನ್ನು ಕೃಷಿ ಇಲಾಖೆಯಿಂದ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಿರುತ್ತಾರೆ.

6) ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಸದರಿ ಸೈನಿಕ ಶಾಲೆಯನ್ನು ಪ್ರಾರಂಭಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಮೆಮೋರೆಂಡಾಂ ಆಫ್ ಅಗ್ರಿಮೆಂಟ್‌ನ್ನು ಸಿದ್ದಪಡಿಸಿ ಕಳುಹಿಸಲಾಗಿದೆ.

7) ಮುಂದುವರೆದು, ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಕೊಡಗಿನಲ್ಲಿ ಸೈನಿಕ ಶಾಲೆಯನ್ನು ಪ್ರಾರಂಭಿಸಲು ರಾಜ್ಯ ಸರ್ಕಾರದ ಒಪ್ಪಿಗೆಯನ್ನು ಸಹ ಕೇಂದ್ರ ಸರ್ಕಾರಕ್ಕೆ ತಿಳಿಸಲಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಮೆಮೋರೆಂಡಾಂ ಆಫ್ ಅಗ್ರಿಮೆಂಟ್‌ನ್ನು ರಾಜ್ಯ ಸರ್ಕಾರದ ಪರವಾಗಿ ಸಹಿ ಮಾಡಿ, ಕೇಂದ್ರ ಸರ್ಕಾರದ ರಕ್ಷಣಾ ಮಂತ್ರಾಲಯಕ್ಕೆ ಸಹಿಗಾಗಿ ಕಳುಹಿಸಲಾಗಿದೆ.

8) ಮೇಲೆ ಕ್ರಮಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ ಆರ್ಥಿಕ ಇಲಾಖೆಯು 2007–08ನೇ ಸಾಲಿನ ಪೂರಕ ಅಂದಾಜಿನಲ್ಲಿ (ಮೊದಲನೆ ಕಂತು) ವಿವಿಧ ಇಲಾಖೆಗಳಿಗೆ ಒದಗಿಸಲಾದ ಮೊತ್ತವನ್ನು ಉಪಯೋಗಿಸಿಕೊಳ್ಳುವಾಗ ಮಿತವ್ಯಯ ಆದೇಶ ಇತರೆ

ಆರ್ಥಿಕ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಸೂಚಿಸಿದೆ. ಆರ್ಥಿಕ ಇಲಾಖೆಯಿಂದ ಹೆಚ್ಚುವರಿ ಅನುದಾನವನ್ನು ಉಪಯೋಗಿಸಿಕೊಳ್ಳಲು ಈಗಾಗಲೇ ಅನುಮತಿಯನ್ನು ನೀಡಲಾಗಿದ್ದು, ಅಂತಹ ಮೊತ್ತಗಳನ್ನು ಪೂರಕ ಅಂದಾಜಿನಲ್ಲಿ ಸೇರಿಸಲಾಗಿರುತ್ತದೆಂದು ತಿಳಿಸಲಾಗಿರುತ್ತದೆ. ಇಂತಹ ಮೊತ್ತಗಳನ್ನು ಆರ್ಥಿಕ ಇಲಾಖೆಯಿಂದ ಪುನ: ಬಿಡುಗಡೆ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ ಹಣ ಬಿಡುಗಡೆ ಮಾಡತಕ್ಕದ್ದೆಂದು ಸೂಚಿಸಿರುತ್ತಾರೆ. ಮುಂದುವರೆದು, ಯಾವುದೇ ಕಾರಣಕ್ಕಾಗಿ ಪೂರಕ ಅಂದಾಜುಗಳಲ್ಲಿ ಒದಗಿಸಿರುವ ಮೊತ್ತ ಭಾಗಶ: ಅಥವಾ ಪೂರ್ಣವಾಗಿ ಉಪಯೋಗಿಸಲು ಆಗದಿದ್ದಲ್ಲಿ ದಿನಾಂಕ 31–03–2008ರ ಒಳಗಾಗಿ ಸರ್ಕಾರಕ್ಕೆ ಅಧ್ಯರ್ಪಣೆ ಮಾಡುವಂತೆ ಸಹ ಆರ್ಥಿಕ ಇಲಾಖೆಯು ಸೂಚಿಸಿರುತ್ತದೆ.

9) ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 10 ಸಿಎಸ್‌ಬಿ 2006, ಬೆಂಗಳೂರು, ದಿನಾಂಕ 22ನೇ ಆಗಸ್ಟ್ 2007**

10) ಮೇಲ್ಕಂಡ ಪ್ರಸ್ತಾವಗಳ ಹಿನ್ನಲೆಯಲ್ಲಿ, ಕೊಡಗು ಜಿಲ್ಲೆಯ ಕೂಡಿಗೆಯಲ್ಲಿ "ಸೈನಿಕ ಶಾಲೆ ಕೊಡಗು" ವನ್ನು 2007–08ನೇ ಸಾಲಿನಿಂದ ಪ್ರಾರಂಭಿಸಲು ಈ ಮೂಲಕ ಆದೇಶಿಸಲಾಗಿದೆ. ಈ ಸೈನಿಕ ಶಾಲೆಯನ್ನು ಈಗಾಗಲೇ ಬಿಜಾಪುರದಲ್ಲಿ ನಡೆಯುತ್ತಿರುವ "ಬಿಜಾಪುರ ಸೈನಿಕ ಶಾಲೆ"ಯ ಮಾದರಿಯಲ್ಲೇ ರಾಜ್ಯ ಸರ್ಕಾರವು ನೀಡಲಿರುವ ಎಲ್ಲಾ ಸವಲತ್ತುಗಳನ್ನು ನೀಡಿ ನಿರ್ವಹಿಸತಕ್ಕದ್ದು.

11) ಕೊಡಗು ಸೈನಿಕ ಶಾಲೆಯಲ್ಲಿ 6ನೇ ತರಗತಿಯಿಂದ 12ನೇ ತರಗತಿಯವರೆಗೆ ಬೋಧಿಸಲು ಒಟ್ಟು 600 ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಹಂತ ಹಂತವಾಗಿ ದಾಖಲು ಮಾಡಿಕೊಳ್ಳಲು ಮತ್ತು ಪ್ರಥಮ ವರ್ಷಕ್ಕೆ ಈ ಸಾಲಿನಲ್ಲಿ 80 ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

12) ಸದರಿ ಸೈನಿಕ ಶಾಲೆಯ ವಿದ್ಯಾರ್ಥಿಗಳಿಗೆ ಈ ಕೆಳಕಂಡಂತೆ ಶುಲ್ಕ ನಿಗದಿ ಪಡಿಸತಕ್ಕದ್ದು;–

| ಶುಲ್ಕ/ವೆಚ್ಚದ ವಿವರ | ಮೊತ್ತ (ರೂ.ಗಳಲ್ಲಿ) | ಷರಾ |
|---|---|---|
| ಬೋಧನಾ ಶುಲ್ಕ (ವರ್ಷಕ್ಕೆ) | 37,203.00 | ಇದರಲ್ಲಿ ರೂ.14,000–00 ಸರ್ಕಾರದಿಂದ ನೀಡಲಾಗುತ್ತದೆ. |
| ಊಟ ತಿಂಡಿಗಾಗಿ (ವರ್ಷಕ್ಕೆ) | 10,575.00 | ಇದರಲ್ಲಿ ವಾರ್ಷಿಕ 295 ದಿನಗಳಿಗೆ ದಿನ ಒಂದಕ್ಕೆ ರೂ.15ರಂತೆ ಸರ್ಕಾರದಿಂದ ನೀಡಲಾಗುತ್ತದೆ. |
| ಸಮವಸ್ತ್ರದ ಬಾಬ್ತು (ಸರ್ಕಾರದಿಂದ ನೀಡಲಾಗುತ್ತದೆ) | 3,000.00 (ಮೊದಲ ವರ್ಷಕ್ಕೆ) | ರೂ.750.00 ನಂತರದ ವರ್ಷಗಳಿಗೆ |
| ಮುನ್ನೆಚರಿಕೆ ಬಾಬ್ತು (ಕಾಷನ್ ಮನಿ) | 3,000.00 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕೆಡೆಟ್‌ಗಳಿಗೆ ರೂ.1,500.00. ಇದು ಒಂದು ಬಾರಿಯ ಶುಲ್ಕವಾಗಿದ್ದು, ಕೆಡೆಟ್‌ಗಳು ಶಾಲೆಯಿಂದ ನಿರ್ಗಮಿಸುವ ಸಮಯದಲ್ಲಿ ಅವರುಗಳಿಗೆ ಈ ಹಣವನ್ನು ಹಿಂತಿರುಗಿಸಲಾಗುವುದು. |
| ಸಾದಿಲ್ವಾರು ವೆಚ್ಚ | 1,500.00 | ––––––– |
| ಪಾಕೆಟ್ ಮನಿ | 1,500.00 | ––––– |
| ಇತರೆ ವೆಚ್ಚ | ವಾಸ್ತವಿಕ | ಪ್ರಯಾಣ ವೆಚ್ಚ, ಪರೀಕ್ಷೆ ಶುಲ್ಕ, ಪ್ರವಾಸ ವೆಚ್ಚ ಇತ್ಯಾದಿಗಳಿಗೆ |

13) ಉದ್ದೇಶಿತ ಕೊಡಗು ಸೈನಿಕ ಶಾಲೆಯನ್ನು ಪ್ರಾರಂಭಿಸಲು ಅಗತ್ಯವಿರುವ ಕಟ್ಟಡ ಕಾಮಗಾರಿಗಳಿಗೆ ಕೇಂದ್ರ ಸರ್ಕಾರದ ಸೂಚನೆಯ ಪ್ರಕಾರ ಅಂದಾಜು ರೂ.25.00 ಕೋಟಿ (ಇಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ) ವೆಚ್ಚ ತಗಲುವುದಾಗಿ ತಿಳಿಸಲಾಗಿದೆ. ಈ ವೆಚ್ಚವನ್ನು ರಾಜ್ಯ ಸರ್ಕಾರ 5 ರಿಂದ 6 ವರ್ಷಗಳಲ್ಲಿ ಅವಶ್ಯಕತೆಗೆ ಅನುಗುಣವಾಗಿ ಹಂತ ಹಂತವಾಗಿ ಪ್ರಗತಿಯನ್ನು ಆಧರಿಸಿ ಬಿಡುಗಡೆ ಮಾಡಲಾಗುವುದು. ವೆಚ್ಚದ ವಿವರ ಈ ಕೆಳಕಂಡಂತಿದೆ:–

| ಕ್ರ.ಸಂ | ಹಂತ | ಮೂಲಭೂತ ಸೌಲಭ್ಯದ ವಿವರಗಳು | ಅಂದಾಜು ವೆಚ್ಚ (ರೂ.ಗಳಲ್ಲಿ) |
|---|---|---|---|
| ಅ | I | 60 ಕೆಡೆಟ್‌ಗಳಿಗೆ ಎರಡು ಬೋಧನಾ ಕೊಠಡಿಗಳು, ಕೆಡೆಟ್‌ಗಳಿಗೆ ಮೆಸ್, ಪ್ರಾಂಶುಪಾಲರ, ರಿಜಿಸ್ಟ್ರಾರ್‌ರ, ಕ್ವಾರ್ಟರ್ ಮಾಸ್ಟರ್‌ರ, ಲೆಕ್ಕಾಧಿಕಾರಿ, ಕಛೇರಿ ಅಧೀಕ್ಷಕರುಗಳ ಕಛೇರಿ, 60 ವಿದ್ಯಾರ್ಥಿಗಳಿಗೆ ವಸತಿನಿಲಯ, ಇಬ್ಬರು ಅಧಿಕಾರಿಗಳ ಮತ್ತು 10 ಸಿಬ್ಬಂದಿಗೆ ವಸತಿಗೃಹ ನಿರ್ಮಾಣದ ಕಾಮಗಾರಿಗಾಗಿ | 4.00 ಕೋಟಿಗಳು (ನಾಲ್ಕು ಕೋಟಿಗಳು ಮಾತ್ರ) |
| ಆ | II | 120ರ ಕೆಡೆಟ್‌ಗಳಿಗಾಗಿ 2 ಹೆಚ್ಚುವರಿ ಬೋಧನಾ ಕೊಠಡಿಗಳು, ವಿಜ್ಞಾನ ಪ್ರಯೋಗಾಲಯಗಳು, ಜನರೇಟರ್ ಕೊಠಡಿ, ಕಛೇರಿ ಸಂಕೀರ್ಣ ಮುಕ್ತಾಯಗೊಳಿಸಲು, 120 ವಿದ್ಯಾರ್ಥಿಗಳಿಗೆ ವಸತಿ ನಿಲಯ ಮತ್ತು 20 ಸಿಬ್ಬಂದಿಗಾಗಿ ವಸತಿಗೃಹ ನಿರ್ಮಾಣ ಕಾಮಗಾರಿಗಾಗಿ | 5.00 ಕೋಟಿಗಳು (ಐದು ಕೋಟಿಗಳು ಮಾತ್ರ) |

| ಕ್ರ.ಸಂ | ಹಂತ | ಮೂಲಭೂತ ಸೌಲಭ್ಯದ ವಿವರಗಳು | ಅಂದಾಜು ವೆಚ್ಚ (ರೂ.ಗಳಲ್ಲಿ) |
|---|---|---|---|
| ಇ | III | ಎಲ್ಲಾ ಬೋಧನಾ ಕೊಠಡಿಗಳನ್ನು ಪೂರ್ಣಗೊಳಿಸಲು, 200 ವಿದ್ಯಾರ್ಥಿಗಳ ವಸತಿನಿಲಯ, ಸಿಬ್ಬಂದಿಗಳಿಗೆ ವಸತಿಗೃಹ ಪೂರ್ಣಗೊಳಿಸಲು, ಲ್ಯಾಂಡ್‌ಸ್ಕೇಪಿಂಗ್ ಮತ್ತು ಆಟದ ಮೈದಾನ ಅಭಿವೃದ್ಧಿ ಕಾಮಗಾರಿಗಾಗಿ | 3.00 ಕೋಟಿಗಳು (ಮೂರು ಕೋಟಿಗಳು ಮಾತ್ರ) |
| ಈ | IV | ಶೈಕ್ಷಣಿಕ ಬ್ಲಾಕ್‌ಗಳನ್ನು ಪೂರ್ಣಗೊಳಿಸಲು, 300 ವಿದ್ಯಾರ್ಥಿಗಳಿಗೆ ವಸತಿನಿಲಯ, ಜಿಮ್ನಾಷಿಯಂ, ಆಟದ ಮೈದಾನಗಳಿಗೆ ಮತ್ತು 40 ಸಿಬ್ಬಂದಿಗೆ ವಸತಿಗೃಹ ಕಾಮಗಾರಿಗಾಗಿ | 4.00 ಕೋಟಿಗಳು (ನಾಲ್ಕು ಕೋಟಿಗಳು ಮಾತ್ರ) |
| ಉ | V | ವಿದ್ಯಾರ್ಥಿಗಳ ವಸತಿನಿಲಯ ಸಂಕೀರ್ಣವನ್ನು ಪೂರ್ಣಗೊಳಿಸಲು. ನಿವಾಸಗಳ ಸೌಲಭ್ಯಗಳನ್ನು ಪೂರ್ಣಗೊಳಿಸಲು ಮತ್ತು ಒಳಾಂಗಣ ಕ್ರೀಡಾಂಗಣ ಹಾಲ್ ಕಾಮಗಾರಿಗಾಗಿ | 4.00 ಕೋಟಿಗಳು (ನಾಲ್ಕು ಕೋಟಿಗಳು ಮಾತ್ರ) |
| ಊ | VI | ಆಡಿಟೋರಿಯಂ ನಿರ್ಮಾಣ, ಎಲ್ಲಾ ಕ್ರೀಡಾಂಗಣಗಳನ್ನು ಪೂರ್ಣಗೊಳಿಸಲು ಮತ್ತು ಮುಖ್ಯೋಪಾಧ್ಯಾಯರ ವಸತಿ ಗೃಹ ನಿರ್ಮಾಣದ ಕಾಮಗಾರಿಗಾಗಿ | 3.00 ಕೋಟಿಗಳು (ಮೂರು ಕೋಟಿಗಳು ಮಾತ್ರ) |
| ಋ | VII | ಶಾಲೆಯ ಕಮ್ಯೂನಿಟಿ ಕೇಂದ್ರ, ಈಜುಕೊಳ | 2.00 ಕೋಟಿಗಳು (ಎರಡು ಕೋಟಿಗಳು ಮಾತ್ರ) |
| | | ಒಟ್ಟು ಅಂದಾಜು ವೆಚ್ಚದ ಮೊತ್ತ | 25.00 ಕೋಟಿಗಳು (ಇಪ್ಪತ್ತೈದು ಕೋಟಿಗಳು ಮಾತ್ರ) |

14) ಮೇಲೆ ಓದಲಾದ (7)ರ ಆರ್ಥಿಕ ಇಲಾಖೆಯ ಪತ್ರದನ್ವಯ ಹಾಗೂ ಅದರಲ್ಲಿ ನೀಡಲಾದ ಸೂಚನೆಯನ್ವಯ 2007–08ನೇ ಸಾಲಿನಲ್ಲಿ ಸದರಿ ಸೈನಿಕ ಶಾಲೆಯನ್ನು ಪ್ರಾರಂಭಿಸಲು ಕ್ರಮ ಸಂಖ್ಯೆ (ಅ) ರಲ್ಲಿ ನಮೂದಿಸಲಾದ ಮೊದಲನೇ ಹಂತದ ಅನಾವರ್ತಕ (Non-recurring) ವೆಚ್ಚದ ಬಾಬ್ತಿಗಾಗಿ ಮತ್ತು ತಾತ್ಕಾಲಿಕ ಕಟ್ಟಡಗಳ ಪುನರುಜ್ಜೀವನ, ಸದರಿ ಸೈನಿಕ ಶಾಲೆಯ ಸುತ್ತ ಕಾಂಪೌಂಡ್ ಗೋಡೆ ನಿರ್ಮಿಸಲು, ಪ್ರಥಮ ವರ್ಷದ 60 ವಿದ್ಯಾರ್ಥಿಗಳ ಮೆಸ್‌ಗಾಗಿ ಅಡಿಗೆ ಪಾತ್ರೆ, ಉಪಕರಣಗಳು ಹಾಗೂ ಇನ್ನಿತರೆ ಪ್ರಾರಂಭಿಕ ಅನಾವರ್ತಕ ವೆಚ್ಚದ ಬಾಬ್ತುಗಳಿಗಾಗಿ ರೂ.5.00 ಕೋಟಿ (ಐದು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಹಾಗೂ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದ ವೇತನಗಳು, ವಿದ್ಯಾರ್ಥಿಗಳ ಬೋಧನಾಶುಲ್ಕ, ಆಹಾರಭತ್ಯೆ, ಸಮವಸ್ತ್ರಗಳ ಭತ್ಯೆ ಹಾಗೂ ಇನ್ನಿತರೆ ಅನುಮೋದಿತ ವೆಚ್ಚಗಳು ಮತ್ತು ಕಛೇರಿ ವೆಚ್ಚಗಳಿಗಾಗಿ ಆವರ್ತಕ (recurring) ವೆಚ್ಚದ ಬಾಬ್ತಿಗಾಗಿ ರೂ.1.30 ಕೋಟಿ (ಒಂದು ಕೋಟಿ ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು 2007–08ನೇ ಸಾಲಿನ ಪೂರಕ ಅನುದಾನ – 1ರಲ್ಲಿ ಒದಗಿಸಲಾದ ಮೊತ್ತದಿಂದ ಅನುದಾನವನ್ನು ಬಿಡುಗಡೆ ಮಾಡಲು ಆದೇಶಿಸಲಾಗಿದೆ.

15) ಮೇಲಿನ ಕಂಡಿಕೆ 14 ರಲ್ಲಿ ನಮೂದಿಸಲಾದ ಅನುದಾನಗಳನ್ನು ಕೆಳಕಂಡ ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು:–

1. *"2202 ಸಾಮಾನ್ಯ ಶಿಕ್ಷಣ–02 ಪ್ರೌಢಶಿಕ್ಷಣ–107 ವಿದ್ಯಾರ್ಥಿವೇತನ–5ಸೈನಿಕಶಾಲೆ ಕೊಡಿಗೆ–00–059 ಇತರೆ ಖರ್ಚು (ಯೋಜನೆ)" ರೂ130.00 ಲಕ್ಷಗಳು (ಒಂದು ನೂರ ಮುವತ್ತು) ಲಕ್ಷಗಳು ಮಾತ್ರ; ಮತ್ತು*
2. *" 4202 ಶಿಕ್ಷಣ, ಕ್ರೀಡೆ, ಕಲೆ ಮತ್ತು ಸಂಸ್ಕೃತಿಯ ಮೇಲಣ ಬಂಡವಾಳ ವೆಚ್ಚ–01 ಸಾಮಾನ್ಯ ಶಿಕ್ಷಣ–202 ಸೆಕೆಂಡರಿ ಶಿಕ್ಷಣ–1 ಕಟ್ಟಡಗಳು–04 ಸೈನಿಕಶಾಲೆ ಕೂಡಿಗೆ–071 ಕಟ್ಟಡ ವೆಚ್ಚಗಳು (ಯೋಜನೆ)" ರೂ.500.00ಲಕ್ಷಗಳು (ಐದು ನೂರು ಲಕ್ಷಗಳು) ಮಾತ್ರ.*

16) ಈ ಆದೇಶದ ಕಂಡಿಕೆ 14 ಮತ್ತು 15ರನ್ವಯ ಬಿಡುಗಡೆ ಮಾಡಲಾಗಿರುವ ಒಟ್ಟಾರೆ ಅನುದಾನ ರೂ.630.00 ಲಕ್ಷ(ಆರುನೂರ ಮುವತ್ತು ಲಕ್ಷಗಳು ಮಾತ್ರ)ಗಳನ್ನು ಸೈನಿಕ ಶಾಲೆಗೆ ಸಂಬಂಧಿಸಿದ ಹಣಕಾಸಿನ ಕಾರ್ಯನಿರ್ವಹಣೆಗಾಗಿ ಜಿಲ್ಲಾಧಿಕಾರಿಗಳು ಮಡಿಕೇರಿ ಮತ್ತು ಪ್ರಾಂಶುಪಾಲರು ಸೈನಿಕಶಾಲೆ, ಕೊಡಗು ಇವರುಗಳ ಜಂಟಿ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಜಂಟಿ ಖಾತೆಯನ್ನು ತೆರೆದು ನಿರ್ವಹಿಸತಕ್ಕದ್ದು.

17) ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 20–07–2007ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 743 ವೆಚ್ಚ 8/2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ದಿನಾಂಕ 16–08–2007ರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2007ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎನ್.ಸೊಮಶೇಖರ್**

ಪಿ.ಆರ್. 1539

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ

**ವಿಷಯ:** ಡಾ।। ಎಸ್.ಆರ್. ರಂಗನಾಥನ್ ರವರ ಜನ್ಮದಿನವಾದ, ಆಗಸ್ಟ್ 12, ಈ ದಿನವನ್ನು "ಗ್ರಂಥಪಾಲಕರ ದಿನ" ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಇಂಡಿಯನ್ ಪಬ್ಲಿಕ್ ಲೈಬ್ರರೀಸ್ ಅಸೋಸಿಯೇಶನ್, ಕೇರ್‌ಆಫ್ ರಾಜ್ಯ ಕೇಂದ್ರ ಗ್ರಂಥಾಲಯ, ಕಬ್ಬನ್ ಪಾರ್ಕ್, ಬೆಂಗಳೂರು ಇವರ ದಿನಾಂಕ:03.07.2007ರ ಪತ್ರ ಸಂಖ್ಯೆ:ಪಿಎಲ್‌ಎ/ಎಸ್‌ಆರ್‌ಆರ್‌ಎಲ್‌ಡಿ-1/2006-07.

**ಪ್ರಸ್ತಾವನೆ:**

ಭಾರತ ಗ್ರಂಥಾಲಯ ಚಳುವಳಿಯ ಪಿತಾಮಹರಾದ ಡಾ।। ಎಸ್.ಆರ್. ರಂಗನಾಥನ್ ಇವರ ಜನ್ಮದಿನಾಂಕವು ಆಗಸ್ಟ್ 12 ಆಗಿದ್ದು ಈ ದಿನವನ್ನು "ಗ್ರಂಥಪಾಲಕರ ದಿನ" ಎಂದು ಘೋಷಿಸಲು ಹಾಗೂ ಈ ದಿನಾಚರಣೆಯ ಸಂದರ್ಭದಲ್ಲಿ, ಕೈಗೊಳ್ಳಬಹುದಾದ ಕ್ರಮಗಳ ಕುರಿತು ಮೇಲೆ ಓದಲಾದ ದಿನಾಂಕ:03.07.2007ರ ಪತ್ರದನ್ವಯ ಕೋರಲಾಗಿದೆ. ಆ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 154 ಎಲ್‌ಐಬಿ 2007, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2007**

2. ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ।। ಎಸ್.ಆರ್. ರಂಗನಾಥನ್ ಇವರ ಜನ್ಮದಿನಾಂಕವಾದ, ಆಗಸ್ಟ್ 12, ಈ ದಿನವನ್ನು ಪ್ರತಿ ವರ್ಷ "ಗ್ರಂಥಪಾಲಕರ ದಿನ" ಎಂದು ಆಚರಿಸಲು ಈ ಮೂಲಕ ಘೋಷಿಸಲಾಗಿದೆ.

3. ಸದರಿ ದಿನವನ್ನು ಸಾರ್ವಜನಿಕ ಗ್ರಂಥಾಲಯ ಇಲಾಖಾ ವತಿಯಿಂದ ಸೂಕ್ತ ರೀತಿಯಲ್ಲಿ ಆಚರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಸೋಮಶೇಖರ್**

ಪಿ.ಆರ್. 1511

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಈ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಿರಾ, ತುಮಕೂರು ಜಿಲ್ಲೆ ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ:ಆರ್‌ಡಿ 67 ಎಡಿಇ 2004 ದಿನಾಂಕ:04.04.2006.

2. ಶ್ರೀ ಈ. ರಾಮಕೃಷ್ಣಪ್ಪ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ:15.04.2005 ಮತ್ತು 30.08.2005.

**ಪ್ರಸ್ತಾವನೆ:**

ಶ್ರೀ ಈ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಿರಾ, ತುಮಕೂರು ಜಿಲ್ಲೆ ಇವರು ಈ ಹಿಂದೆ ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ತಹಶೀಲ್ದಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, ಭಾರತದ ಚುನಾವಣಾ ಆಯೋಗದ ಕಾರ್ಯಕ್ರಮದಂತೆ 2004ರ ಅವಧಿಯಲ್ಲಿ ವಿಧಾನ ಸಭಾ ಮತದಾರರ ಪಟ್ಟಿಯ ಸಂಕ್ಷಿಪ್ತ ಪರಿಷ್ಕರಣೆ ಕಾರ್ಯವು ನಡೆದಿದ್ದು, ಸದರಿಯವರ ಅವಧಿಯಲ್ಲಿ ಮತದಾರರ ಪಟ್ಟಿಯಲ್ಲಿರುವ ಹೆಸರುಗಳನ್ನು ತೆಗೆಯುಲು ಕೆಲವು ಆಕ್ಷೇಪಣಾದಾರದಿಂದ ನಮೂನೆ-7 ರಲ್ಲಿ ಅರ್ಜಿಗಳನ್ನು ಮತದಾನ ಕೇಂದ್ರಗಳ ನಿರ್ದಿಷ್ಠಾಧಿಕಾರಿಗಳ ಮೂಲಕ ಕಛೇರಿಯಲ್ಲಿ ಸ್ವೀಕೃತವಾಗಿದ್ದರೂ ಸಹ ಇವುಗನ್ನು ಮತದಾರರ ನೊಂದಣಿ ನಿಯಮ 1960ರ ನಿಯಮ 18 ರಿಂದ 21ಎ ಗಳನ್ನು ಪಾಲಿಸದೇ ಇತ್ಯರ್ಥಪಡಿಸಿ 835 ಹೆಸರುಗಳನ್ನು ತಪ್ಪಾಗಿ ಮತದಾರರ ಪಟ್ಟಿಯಿಂದ ಕೈಬಿಡಲು ಕಾರಣರಾಗಿದ್ದು, ಕಛೇರಿಯಲ್ಲಿನ ದಾಖಲೆಗಳನ್ನು ಪರಿಶೀಲಿಸಿದಾಗ ಮತದಾರರ ಪಟ್ಟಿಯಿಂದ ಹೆಸರುಗಳನ್ನು ತೆಗೆಯಲು 1451 ಅರ್ಜಿಗಳನ್ನು ಸ್ವೀಕರಿಸಿದ್ದು, ಈ ಪೈಕಿ 835 ಅರ್ಜಿಗಳನ್ನು ಪುರಸ್ಕರಿಸಿ ಹಾಲಿ ಇದ್ದ ಮತದಾರರ ಪಟ್ಟಿಯಿಂದ ಹೆಸರುಗಳನ್ನು ನಿಯಮಬಾಹಿರವಾಗಿ ಕೈಬಿಡಲು ಕಾರಣರಾಗಿರುತ್ತಾರೆಂದೂ, ಇಂತಹ ಕ್ರಮ ಕೈಗೊಳ್ಳುವ ಮೂಲಕ ಗ್ರಾಮ ಲೆಕ್ಕಿಗರಿಂದ ಹಾಗೂ ರಾಜಸ್ವ ನಿರಕೀಕ್ಷಕರಿಂದ ಯಾವುದೇ ವರದಿ ಪಡೆಯದೆ ಹಾಗೂ ಸೂಕ್ತ ದಾಖಲೆಗಳನ್ನು ಪರಿಶೀಲಿಸದೇ, ಗ್ರಾಮ ಲೆಕ್ಕಿಗರು ಮತ್ತು ರಾಜಸ್ವ ನಿರೀಕ್ಷಕರ ಷರಾದ ಆಧಾರದ ಮೇಲೆ ತಹಶೀಲ್ದಾರರಾಗಿದ್ದ ಶ್ರೀ ಈ. ರಾಮಕೃಷ್ಣಪ್ಪ ನವರು ಪ್ರತಿ ಅರ್ಜಿಯ ಮೇಲೆ ಅಂಗೀಕರಿಸಿದೆ ಅಥವಾ ತಿರಸ್ಕರಿಸಿದೆ ಎಂದು ಸಹಿ ಮಾಡಿರುತ್ತಾರೆಂದೂ, ಮತದಾರರ ಪಟ್ಟಿಯಿಂದ ಹೆಸರುಗಳನ್ನು ತೆಗೆಯುವ ಗುರುತರವಾದ ವಿಚಾರದಲ್ಲಿ ತನಿಖೆಯಾಗಲಿ, ಆಕ್ಷೇಪಿತ ಮತ್ತು ಆಕ್ಷೇಪಣಾದಾರರಿಗೆ ನೋಟೀಸ್ ನೀಡುವ ಮೂಲಕ ಅಥವಾ ಭೌತಿಕ ಪರಿಶೀಲನೆ ಮೇರೆಗೆ ವಿಚಾರಣೆ ನಡೆಸಿ, ನಿರ್ಣಯ ಕೈಗೊಳ್ಳದೇ 835 ಅರ್ಜಿಗಳನ್ನು ಮತದಾರರ ಪಟ್ಟಿಯಿಂದ ಕೈಬಿಡಲು ಕಾರಣರಾಗಿ ಮತದಾರರ ನೊಂದಣಿ ನಿಯಮಗಳು, 1960ರ ನಿಯಮ 18 ರಿಂದ 21ನ್ನು ಉಲ್ಲಂಘಿಸಲು ಕಾರಣರಾಗಿರುವುದು ದಾಖಲೆಯಿಂದ ಮೇಲ್ನೋಟಕ್ಕೆ ನಿಜಾಂಶದಿಂದ ಕೂಡಿದ್ದರ ಮೇರೆಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:04.04.2006ರಲ್ಲಿ ಸಚಿವಾಲಯದ ಕಂದಾಯ ಇಲಾಖೆಯು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11 ರಡಿಯಲ್ಲಿ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಿತ್ತು.

ಶ್ರೀ ಈ. ರಾಮಕೃಷ್ಣಪ್ಪ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕಗಳಲ್ಲಿ ಮನವಿಯನ್ನು ಸಲ್ಲಿಸಿ, ನೋಟೀಗೆ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವಂತೆ ಕೋರಿದ್ದು, ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ಹಾಗೂ ಸದರಿಯವರು ಅಧೀನ ಕಾರ್ಯದರ್ಶಿಯವರ ಕೇಡರ್‌ನವರಾಗಿದ್ದರಿಂದ, ಅವರ ವಿರುದ್ಧ ಶಿಸ್ತು ಕ್ರಮ ಮುಂದುವರಿಸಿಕೊಂಡು ಹೋಗಲು ಕಂದಾಯ ಇಲಾಖೆಯು ಪ್ರಸ್ತಾವನೆಯೊಂದಿಗೆ ಅಗತ್ಯ ದಾಖಲೆಗಳನ್ನು ಒದಗಿಸಿದ್ದರ ಮೇರೆಗೆ ಅವುಗಳನ್ನು ಪರಿಶೀಲಿಸಿದ ನಂತರ ಸದರಿಯವರ ನಿಯಮ ಉಲ್ಲಂಘನೆ ಮತ್ತು ಅಧಿಕಾರ ದುರುಪಯೋಗಪಡಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ಕಂಡು ಹಿಡಿಯುವ ಉದ್ದೇಶದಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 435 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಈ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಿರಾ, ತುಮಕೂರು ಜಿಲ್ಲೆ ಇವರ ಮೇಲಿನ

ಆರೋಪಗಳಿಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11(2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ರೀಜನಲ್ ಕಮೀಷನರ್ ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಅದೇ ನಿಯಮಾವಳಿಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಉಪ ವಿಭಾಗಾಧಿಕಾರಿಗಳು, ಕೋಲಾರ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1512

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಜಿ.ವಿ. ವೆಂಕಟೇಶಪ್ಪ, ಹಿಂದಿನ ತಹಶೀಲ್ದಾರ್, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ (ಪ್ರಸ್ತುತ ನಿವೃತ್ತ) ಹಾಗೂ ಶ್ರೀ ಎಸ್.ಎನ್. ಕೃಷ್ಣಮೂರ್ತಿ, ಹಿಂದಿನ ದ್ವಿ.ದ. ಸಹಾಯಕರು ಶ್ರೀನಿವಾಸಪುರ ತಾಲ್ಲೂಕು ಕಛೇರಿ ಇವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡುವ ಕುರಿತು.

**ಓದಲಾಗಿದೆ:**
1. ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆ ದಿನಾಂಕ:13.08.2002.
2. ಕಾರಣ ಕೇಳುವ ನೋಟೀಸು ದಿನಾಂಕ: 15.4.2005.
3. ಶ್ರೀ ಜಿ.ವಿ. ವೆಂಕಟೇಶಪ್ಪ ಇವರ ಸಮಜಾಯಿಷಿ ದಿನಾಂಕ: 24.08.2006.
4. ಮಾನ್ಯ ಕೆ.ಎ.ಟಿ. ಅರ್ಜಿ ಸಂಖ್ಯೆ: 7856/2006, ದಿನಾಂಕ:26.2.2007ರ ಆದೇಶ.
5. ತಹಶೀಲ್ದಾರ್, ಶ್ರೀನಿವಾಸಪುರ ತಾಲ್ಲೂಕು ಇವರ ವರದಿ ದಿನಾಂಕ:22.5.2007.

**ಪ್ರಸ್ತಾವನೆ:**

ಶ್ರೀ ಜಿ.ವಿ. ವೆಂಕಟೇಶಪ್ಪ, ಇವರು ಹಿಂದೆ ಶ್ರೀನಿವಾಸಪುರ ತಾಲ್ಲೂಕು, ಕಸಬಾ ಹೋಬಳಿ, ಪ್ರಭಾರ ರಾಜಸ್ವ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಹಾಗೂ ಶ್ರೀ ಎಸ್.ಎನ್. ಕೃಷ್ಣಮೂರ್ತಿ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಶ್ರೀನಿವಾಸಪುರ ತಾಲ್ಲೂಕು ಕಛೇರಿ, ಕೋಲಾರ ಜಿಲ್ಲೆ ಇವರುಗಳು ಪಾತಪಲ್ಲಿ ಗ್ರಾಮ ಸರ್ವೆ ನಂ: 33 ರಲ್ಲಿ ಪಾತಪಲ್ಲಿ ಗ್ರಾಮ ಸರ್ವೆ ನಂ: 33 ರಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ರಂತೆ ಅನರ್ಹರಾದ ಶ್ರೀ ಬಿ.ವಿ. ದೇವರಾಜ್ ಬಿನ್ ಚಿಕ್ಕವೆಂಕಟಸ್ವಾಮಿ, ಶ್ರೀಮತಿ ರಾಜಮ್ಮ ಕೋಂ ನಾರಾಯಣಪ್ಪ, ಶ್ರೀಮತಿ ಶಾಂತಮ್ಮ ಕೋಂ ಶ್ರೀ ಪಿ.ವಿ. ಶ್ರೀನಿವಾಸನ್ ಮತ್ತು ಶ್ರೀ ಕೆ.ಆರ್. ವೆಂಕಟರೆಡ್ಡಿ ಬಿನ್ ರಾಮಪ್ಪ ಇವರುಗಳಿಗೆ ಅನುಕ್ರಮವಾಗಿ 0-22, 3-20, 3-18 ಮತ್ತು 3-10 ಎಕರೆ ಭೂ ಮಂಜೂರಾತಿಗೆ ಒಂದೇ ದಿನದಲ್ಲಿ ತರಾತುರಿಯಾಗಿ ಕಡತವನ್ನು ತಯಾರಿಸಿ ತಹಶೀಲ್ದಾರ್, ಕಛೇರಿಗೆ ಸಲ್ಲಿಸಿ, ಭೂ ಮಂಜೂರಾತಿಗೆ ಅನರ್ಹರಾದ ವ್ಯಕ್ತಿಗಳಿಗೆ ಶಿಫಾರಸ್ಸು ಮಾಡುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3 (iii) ರಂತೆ ಕರ್ತವ್ಯ ಚ್ಯುತಿ ಎಸಗಿರುತ್ತಾರೆಂದು ಆರೋಪದ ಮೇಲೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಉಲ್ಲೇಖ (1) ರಂತೆ ಪ್ರಸ್ತಾವನೆಯನ್ನು ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ ಇವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4ವರೆಗೆ) ಆರೋಪಿತ ಶ್ರೀ ಜಿ.ವಿ. ವೆಂಕಟೇಶಪ್ಪ, ಇವರು ಹಿಂದೆ ಶ್ರೀನಿವಾಸಪುರ ತಾಲ್ಲೂಕು, ಕಸಬಾ ಹೋಬಳಿ, ಪ್ರಭಾರ ರಾಜಸ್ವ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಹಾಗೂ ಶ್ರೀ ಎಸ್.ಎನ್. ಕೃಷ್ಣಮೂರ್ತಿ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಶ್ರೀನಿವಾಸಪುರ ತಾಲ್ಲೂಕು ಕಛೇರಿ, ಕೋಲಾರ ಜಿಲ್ಲೆ ಇವರುಗಳಿಗೆ ಜಾರಿ ಮಾಡಿ ಆರೋಪಗಳ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 59 ಎಡಿಇ 2002 (ಭಾಗ-1), ದಿನಾಂಕ:15.4.2005ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀ ಜಿ.ವಿ. ವೆಂಕಟೇಶಪ್ಪ ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ ಮತ್ತು ಶ್ರೀ ಎಸ್.ಎನ್. ಕೃಷ್ಣಮೂರ್ತಿ, ಹಿಂದಿನ ದ್ವಿ.ದ. ಸಹಾಯಕರು, ಶ್ರೀನಿವಾಸಪುರ ತಾಲ್ಲೂಕು ಕಛೇರಿ ಇವರು ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

ಶ್ರೀ ಜಿ.ವಿ. ವೆಂಕಟೇಶಪ್ಪ ಇವರು ದಿನಾಂಕ:15.4.2005ರ ಕಾರಣ ಕೇಳುವ ನೋಟೀಸ್ ವಿರುದ್ಧ ಮಾನ್ಯ ಕೆ.ಎ.ಟಿಯಲ್ಲಿ ಅರ್ಜಿ ಸಂಖ್ಯೆ: 7856/2006 ಅನ್ನು ದಾಖಲಿಸಿದ್ದರು. ಮಾನ್ಯ ಕೆಎಟಿಯು ದಿನಾಂಕ: 26.2.2007ರ ಆದೇಶದಲ್ಲಿ ಶ್ರೀ ಜಿ.ವಿ. ವೆಂಕಟೇಶಪ್ಪ, ನಿವೃತ್ತ ತಹಶೀಲ್ದಾರ್ ಇವರು ದಿನಾಂಕ: 24.8.2006ರ ಮನವಿಯಲ್ಲಿನ ಅಂಶಗಳನ್ನು ನಿಯಮಾನುಸಾರ ಪರಿಶೀಲಿಸಿ ಸೂಕ್ತ ಆದೇಶ ಹೊರಡಿಸಲು ಆದೇಶಿಸಿತ್ತು.

ಈ ಪ್ರಕರಣವನ್ನು ಮಾನ್ಯ ಕೆಎಟಿಯ ಆದೇಶದ ಅನ್ವಯ ಸರ್ಕಾರವು ಪರಿಶೀಲಿಸಿ ಶ್ರೀ ಜಿ.ವಿ. ವೆಂಕಟೇಶಪ್ಪ, ನಿವೃತ್ತ ತಹಶೀಲ್ದಾರ್, ಇವರು 23 ವರ್ಷಗಳ ಹಿಂದೆ ಮಾಡಿದ್ದರೆನ್ನಲಾದ ಕರ್ತವ್ಯ ಲೋಪದ ಬಗ್ಗೆ ಆರೋಪಗಳು ಗಂಭೀರ ಸ್ವರೂಪದಲ್ಲಾ ಹಾಗೂ ಸದರಿ ನೌಕರರು ಈಗಾಗಲೇ ನಿವೃತ್ತಿ ಹೊಂದಿರುವುದರಿಂದ, ದಿನಾಂಕ:24.8.2006ರ ಮನವಿಯಲ್ಲಿನ ಅಂಶಗಳನ್ನು ಪರಿಗಣಿಸಿ ಇಲಾಖಾ ತನಿಖೆ ನಡೆಸುವುದು ಅವಶ್ಯವಿಲ್ಲವೆಂದು ತೀರ್ಮಾನಿಸಿ ಹಾಗೂ ಮೇಲೆ ಓದಲಾದ ಕ್ರ.ಸಂ.5ರ ತಹಶೀಲ್ದಾರ್, ಶ್ರೀನಿವಾಸಪುರ ತಾಲ್ಲೂಕು ಇವರ ವರದಿಯಲ್ಲಿ ಪ್ರಕರಣಕ್ಕೆ ಸಂಬಂಧಿಸಿದ ಭೂ ಮಂಜೂರಾತಿಯನ್ನು ದಿನಾಂಕ: 3.11.2006ರಲ್ಲಿ ರದ್ದುಪಡಿಸಲಾಗಿರುತ್ತದೆ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಶಿಸ್ತು ಪ್ರಕರಣವನ್ನು ಕೈ ಬಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 294 ಎಎಸ್‌ಡಿ 2006, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲಿ ಸರ್ಕಾರವು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂ: 7856/2006 ದಿ: 26.2.2007ರ ಆದೇಶದ ಅನ್ವಯ ಪರಿಶೀಲಿಸಿ ಶ್ರೀ ಜಿ.ವಿ. ವೆಂಕಟೇಶಪ್ಪ ಪ್ರಸ್ತುತ ನಿವೃತ್ತ ತಹಶೀಲ್ದಾರ್, ಹಾಗೂ ಶ್ರೀ ಎಸ್.ಎನ್. ಕೃಷ್ಣಮೂರ್ತಿ ಹಿಂದಿನ ದ್ವಿ.ದ.ಸ. ಶ್ರೀನಿವಾಸಪುರ ತಾಲ್ಲೂಕು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈ ಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಚೌಕಿಮಠ**

ಪಿ.ಆರ್. 1513

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗು-3).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕೆ.ಐ.ಎ.ಡಿ.ಬಿ.ಯಿಂದ ಸ್ವಾಧೀನವಾಗುತ್ತಿರುವ ಜಮೀನಿಗೆ ಹಣದ ಬದಲಾಗಿ ಅಭಿವೃದ್ಧಿಪಡಿಸಿದ ಜಮೀನನ್ನು ಪರಿಹಾರವಾಗಿ ನೀಡುವ ಬಗ್ಗೆ.

**ಪ್ರಸ್ತಾವನೆ:–**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ 1966ರ ಅಡಿಯಲ್ಲಿ ರಚಿತವಾಗಿರುವ ಕೆ.ಐ.ಎ.ಡಿ. ಮಂಡಳಿಯು ಸದರಿ ಅಧಿನಿಯಮದ ಧ್ಯೇಯೋದ್ದೇಶವಾದ ಕೈಗಾರಿಕಾ ಕ್ಷೇತ್ರಗಳ ಸ್ಥಾಪನೆ ಮತ್ತು ಕೈಗಾರಿಕೆಗಳ ಶೀಘ್ರಗತಿ ಹಾಗೂ ವ್ಯವಸ್ಥಿತ ಸ್ಥಾಪನೆಯನ್ನು ಉತ್ತೇಜಿಸುವ ಉದ್ದೇಶಕ್ಕಾಗಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಕೈಗಾರಿಕಾ ಮೂಲಭೂತ ಸೌಕರ್ಯಗಳು ಹಾಗೂ ಸೌಲಭ್ಯಗಳನ್ನು ಒದಗಿಸುವುದು ಅಗತ್ಯ ಎಂದು ಸರ್ಕಾರದ ಅಭಿಪ್ರಾಯದಲ್ಲಿ ಕಂಡು ಬರುವ ಜಮೀನನ್ನು / ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ.

2) ಸರ್ಕಾರದ ಕೈಗಾರಿಕಾ ನೀತಿಯನುಸಾರ ಕೈಗಾರಿಕೆಗಳನ್ನು ಸ್ಥಾಪಿಸಲು ರಾಜ್ಯದ ವಿವಿಧ ಪ್ರದೇಶಗಳಲ್ಲಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಅಧಿನಿಯಮದನುಸಾರ ಅಧಿಸೂಚನೆಗಳನ್ನು ಹೊರಡಿಸಿ ಸ್ವಾಧೀನದ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಒಪ್ಪಂದದ ಆಧಾರದ ಮೇರೆಗೆ ನಿಗದಿಯಾದ ಭೂಪರಿಹಾರವನ್ನು ಭೂಮಾಲೀಕರು ಪಡೆಯಲೊಪ್ಪದ ಪ್ರಕರಣಗಳಲ್ಲಿ ಕೆ.ಐ.ಎ.ಡಿ.ಬಿ. ಕಾಯ್ದೆ ಅಧಿನಿಯಮದ ಕಲಂ 29(3)ರಡಿ ಜಿಲ್ಲಾಧಿಕಾರಿಗಳು ನಿರ್ಧರಿಸುವ ಅವಾರ್ಡ್ ಮೊಬಲಗನ್ನು ಭೂಮಾಲೀಕರಿಗೆ ನೀಡುವ ಉದಾರ ಭೂ ಪರಿಹಾರ ನೀತಿಯನ್ನು ಮಂಡಳಿಯು ಅನುಸರಿಸುತ್ತಿದೆ. ಆದಾಗ್ಯೂ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಾಗ ರೈತರಿಂದ ಮತ್ತು ಭೂಮಾಲೀಕರಿಂದ ಪ್ರತಿರೋಧ ಎದುರಿಸುವ ಪ್ರಸಂಗಗಳು ಆಗಾಗ್ಗೆ ಉದ್ಭವಿಸುತ್ತಿವೆ.

3) ಕೈಗಾರಿಕೆ ಸ್ಥಾಪನೆ ಮತ್ತು ಕೈಗಾರಿಕೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದಕ್ಕಾಗಿ ಜಮೀನನ್ನು ವಶಪಡಿಸಿಕೊಳ್ಳುವಾಗ ಭೂಮಾಲೀಕರ / ರೈತರ ಪ್ರತಿರೋಧವನ್ನು ಶಮನಗೊಳಿಸಲು ಯಾವ ರೈತರಿಂದ / ಭೂಮಾಲೀಕರಿಂದ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲಾಗುವುದೋ ಅವರಿಗೆ ಹಣದ ಬದಲಾಗಿ ಕೆ.ಐ.ಎ.ಡಿ.ಬಿ.ಯಿಂದ ಅಭಿವೃದ್ಧಿ ಪಡಿಸಿದ ಜಮೀನನ್ನು ಪರಿಹಾರ ರೂಪದಲ್ಲಿ ನೀಡುವ ಬಗ್ಗೆ ಸರ್ಕಾರದ ನೀತಿಯನ್ನು ರೂಪಿಸಿದಲ್ಲಿ ಈ ಸಮಸ್ಯೆಗೆ ಪರಿಹಾರ ಸಿಗಬಹುದು ಎಂದು ದಿನಾಂಕ: 14.3.2007ರಂದು ನಡೆದ ಕೆ.ಐ.ಎ.ಡಿ. ಮಂಡಳಿಯ ಸಭೆಯಲ್ಲಿ ನಿರ್ಣಯವಾಗಿರುತ್ತದೆ. ಈ ವಿಚಾರದಲ್ಲಿ ನಿಯಮಾವಳಿಯನ್ನು ರೂಪಿಸಲು ಮಂಡಳಿಯು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ನಿಟ್ಟಿನಲ್ಲಿ ದಿನಾಂಕ: 15.5.2007ರಂದು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿ ನಿರ್ಣಯ ತೆಗೆದುಕೊಳ್ಳಲಾಗಿದೆ.

4) ಈ ಹಿನ್ನೆಲೆಯಲ್ಲಿ ಕೆ.ಐ.ಎ.ಡಿ.ಬಿ.ಯಿಂದ ಸ್ವಾಧೀನವಾಗುತ್ತಿರುವ ಜಮೀನಿಗೆ ಹಣದ ಬದಲಾಗಿ ಅಭಿವೃದ್ಧಿಪಡಿಸಿದ ಜಮೀನನ್ನು ಪರಿಹಾರವಾಗಿ ನೀಡುವ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 417 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ 13ನೇ ಆಗಸ್ಟ್ 2007**

ಸರ್ಕಾರದ ಕೈಗಾರಿಕಾ ನೀತಿಯನುಸಾರ ಕೈಗಾರಿಕೆಗಳನ್ನು ಸ್ಥಾಪಿಸಲು ರಾಜ್ಯದ ವಿವಿಧ ಪ್ರದೇಶಗಳಲ್ಲಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕರಣಗಳಲ್ಲಿ ಭೂಮಾಲೀಕರಿಗೆ ಉದಾರ ಭೂಪರಿಹಾರ ನೀತಿಯನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಅನುಸರಿಸುತ್ತಿದೆ. ಯಾವ ರೈತರಿಂದ / ಭೂಮಾಲೀಕರಿಂದ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲಾಗುವುದೋ ಅವರಿಗೆ ಮತ್ತಷ್ಟು ಹೆಚ್ಚಿನ ಮತ್ತು ಅನುಕೂಲಕರವಾದ ಪರಿಹಾರವನ್ನು ಒದಗಿಸುವ ದೃಷ್ಟಿಯಿಂದ ಸರ್ಕಾರವು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಸ್ವಾಧೀನವಾಗುತ್ತಿರುವ ಜಮೀನಿಗೆ ಪರಿಹಾರದ ಧನದ ಬದಲಾಗಿ ಅಭಿವೃದ್ಧಿಪಡಿಸಿದ ಜಮೀನನ್ನು ನಿರ್ದಿಷ್ಟ ಅನುಪಾತದಲ್ಲಿ ನೀಡುವ ಭೂ ಪಾಲುದಾರಿಕೆ ಯೋಜನೆಯನ್ನು ಜಾರಿಗೆ ತಂದಿರುತ್ತದೆ. ಈ ಯೋಜನೆಯ ರೂಪುರೇಷೆಗಳು ಮತ್ತು ಈ ಯೋಜನೆಗೆ ಅನ್ವಯವಾಗುವ ಷರತ್ತುಗಳನ್ನು ಈ ಕೆಳಗೆ ನೀಡಲಾಗಿದೆ.

ಅ) ಕೆ.ಐ.ಎ.ಡಿ.ಬಿ.ಯಿಂದ ಸ್ವಾಧೀನವಾಗುತ್ತಿರುವ ಜಮೀನಿಗೆ ಈಗಾಗಲೇ ಜಾರಿಯಲ್ಲಿರುವಂತೆ ಪರಿಹಾರವನ್ನು ಹಣದ ರೂಪದಲ್ಲಿ ನೀಡಲಾಗುವುದು. ಆ ರೀತಿ ಹಣದ ಪರಿಹಾರವನ್ನು ಒಪ್ಪದ ಭೂಮಾಲೀಕರಿಗೆ ಹಾಗೂ ಈ ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಿದ ಭೂಮಿಯನ್ನು ಪಡೆದುಕೊಳ್ಳಲು ಇಚ್ಛೆ ವ್ಯಕ್ತಪಡಿಸಿದವರಿಗೆ ಹಣದ ಬದಲಾಗಿ ಅಭಿವೃದ್ಧಿಪಡಿಸಿದ ಜಮೀನನ್ನು ಪರಿಹಾರವಾಗಿ ನೀಡುವ ಈ ಯೋಜನೆಯನ್ನು ಜಾರಿಮಾಡಲಾಗಿದೆ. ಸರ್ಕಾರದ ಈ ನೀತಿಯು ಸರ್ಕಾರದ ಈ ಆದೇಶ ಹೊರಡಿಸುವ ದಿನಾಂಕದ ನಂತರ ಕೆ.ಐ.ಎ.ಡಿ. ಅಧಿನಿಯಮದ ಕಲಂ 28(1)ರ ಅಡಿಯಲ್ಲಿ ಹೊರಡಿಸಲಾಗುವ ಅಧಿಸೂಚನೆಗಳಿಗೆ ಆಕ್ಷೇಪಣೆಗಳನ್ನು ಆಹ್ವಾನಿಸುವಾಗ ಪ್ರತ್ಯೇಕ ನೋಟೀಸನ್ನು ಭೂಮಾಲೀಕರಿಗೆ ನೀಡಿ ಭೂ

ಪಾಲುದಾರಿಕೆ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳುವ ಬಗ್ಗೆ ಅವರ ಲಿಖಿತ ಹೇಳಿಕೆಯನ್ನು ನಿಗದಿತ ಮುವತ್ತು ದಿನಗಳ ಅವಧಿಯಲ್ಲಿ ಸಲ್ಲಿಸಬೇಕೆಂದು ತಿಳಿಸುವ ಅವಕಾಶವನ್ನು ನೀಡಲಾಗುವುದು.

ಆ) ಈ ಯೋಜನೆಯ ಲಾಭವು ಈಗಾಗಲೇ ಕೆ.ಐ.ಎ.ಡಿ. ಅಧಿನಿಯಮದ ಕಲಂ 28(7)ರ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡ ಜಮೀನನ್ನು ಸುಬರ್ದು (possession) ತೆಗೆದುಕೊಳ್ಳದೇ ಇರುವ ಪ್ರಕರಣಗಳಿಗೆ ಮಾತ್ರ ಅನ್ವಯಿಸುತ್ತದೆ. ಈ ಪ್ರಕರಣಗಳಲ್ಲಿ ಭೂ ಮಾಲೀಕರಿಗೆ 30 ದಿನಗಳ ನೋಟೀಸ್‌ನ್ನು ನೀಡಿ ಭೂ ಪಾಲುದಾರಿಕೆ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳುವ ಬಗ್ಗೆ ಲಿಖಿತ ಒಪ್ಪಿಗೆ ಪಡೆದುಕೊಳ್ಳಲಾಗುವುದು.

ಇ) ಸದರಿ ಭೂಪಾಲುದಾರಿಕೆ ಯೋಜನೆಯು ನಗದು ಪರಿಹಾರ ಅಥವಾ ನಗದು ಬದಲಿಗೆ ಅದೇ ಪ್ರದೇಶದಲ್ಲಿ ಸ್ವಾಧೀನಪಡಿಸಿಕೊಂಡ ಪ್ರತಿ 10 ಗುಂಟೆಗೆ 2,125ಚದರಡಿ ಅನುಪಾತದಲ್ಲಿ ಅಭಿವೃದ್ಧಿಪಡಿಸಿದ ಜಮೀನನ್ನು ನೀಡಲಾಗುವುದು. 10 ಗುಂಟೆಗಿಂತ ಕಡಿಮೆ ವಿಸ್ತೀರ್ಣದ ಜಮೀನಿಗೆ ಪರಿಹಾರವನ್ನು ಹಣದ ರೂಪದಲ್ಲಿ ಮಾತ್ರ ನೀಡಲಾಗುವುದು. 10 ಗುಂಟೆ ನಂತರದ ದಶಾಂಶದ ನಡುವೆ ಬರುವ ಭಾಗಾಂಶದ ವಿಸ್ತೀರ್ಣಕ್ಕೆ ಪರಿಹಾರವನ್ನು ಹಣದ ರೂಪದಲ್ಲಿ ಮಾತ್ರ ನೀಡಲಾಗುವುದು.

**ಈ**) ಈ ಭೂಪಾಲುದಾರಿಕೆ ಯೋಜನೆಯು 10 ಗುಂಟೆ ಅಥವಾ ಹೆಚ್ಚಿನ ಜಮೀನನ್ನು ಕಳೆದುಕೊಂಡ ಭೂಮಾಲೀಕರಿಗೆ ಮಾತ್ರ ಅನ್ವಯಿಸುತ್ತದೆ.

**ಉ**) ಅಭಿವೃದ್ಧಿಗೊಳಿಸಿದ ಜಮೀನನ್ನು ಪರಿಹಾರವಾಗಿ ಪಡೆದ ಭೂಮಾಲೀಕರು ಅದನ್ನು ವಸತಿ / ವಾಣಿಜ್ಯ / ಕೈಗಾರಿಕೆ ಉದ್ದೇಶಗಳಿಗಾಗಿ ಸ್ವತಃ ಬಳಸಿಕೊಳ್ಳಬಹುದು ಅಥವಾ ಸದರಿ ಜಾಗದ ಮೇಲೆ ಮಾಲೀಕತ್ವದ ಪೂರ್ತಿ ಹಕ್ಕನ್ನು ಚಲಾಯಿಸಬಹುದು. ಆದರೆ ಅಂತಹ ಜಾಗದ ಮೇಲೆ ಯಾವುದೇ ನಿರ್ಮಾಣ ಕಾರ್ಯ ಪ್ರಾರಂಭಿಸುವ ಮೊದಲು ನಕ್ಷೆಯನ್ನು ಕೆ.ಐ.ಎ.ಡಿ.ಬಿ. ಯಿಂದ ಮಂಜೂರು ಮಾಡಿಸಿಕೊಳ್ಳತಕ್ಕದ್ದಾಗಿರುತ್ತದೆ.

**ಊ**) ಯೋಜನೆಯು ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಂದು ಕೆ.ಐ.ಎ.ಡಿ. ಕಾಯ್ದೆ ಕಲಂ 28(7)ರ ಅಡಿಯಲ್ಲಿ ಕಬ್ಜೆ ಪಡೆಯದ ಪ್ರಕರಣಗಳಿಗೆ ಮಾತ್ರ ಅನ್ವಯಿಸುತ್ತದೆ.

**ಋ**) ಈ ಯೋಜನೆಯು ಏಕಘಟಕ ಸಂಕೀರ್ಣ (SUC) ಕೈಗಾರಿಕಾ ಘಟಕಕ್ಕಾಗಿ ಹಾಗೂ ಮೂಲಸೌಲಭ್ಯ ಯೋಜನೆಗಳಿಗಾಗಿ (Infrastructural Projects) ಭೂಸ್ವಾಧೀನಪಡಿಸಿಕೊಳ್ಳುವ ಪ್ರಕರಣಗಳಿಗೆ ಅನ್ವಯ ಆಗುವುದಿಲ್ಲ.

**ೠ**) ಈ ಯೋಜನೆಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥರಾವ್**

ಪಿ.ಆರ್. 1514

ಸರ್ಕಾರದ ಅಧೀನ ಕಾರ್ಯದರ್ಶಿ, (ಕೈ.ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲಾ ಶಸ್ತ್ರಾಲಯದಲ್ಲಿ ಸಶಸ್ತ್ರಗಳು ಕಳುವಾಗಿರುವ ಬಗ್ಗೆ ಶ್ರೀ ಕೆ.ಜಿ. ಶೇಷಗಿರಿರಾವ್, ನಿವೃತ್ತ ಎಸ್.ಪಿ. ಹಾಗೂ ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ಬದಲಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಒಇ 282 ಪೊಸಿಪ 2003 ದಿನಾಂಕ: 19.05.2006.
2. ಡಿಜಿ ಹಾಗೂ ಐಜಿಪಿರವರ ಪತ್ರ ಸಂಖ್ಯೆ:ಸಿಬಿ:5:9:2002-2003 ದಿನಾಂಕ: 18.06.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಬೆಳಗಾಂ ಜಿಲ್ಲಾ ಶಸ್ತ್ರಾಲಯದಲ್ಲಿ ಸಶಸ್ತ್ರಗಳು ಕಳುವಾಗಿರುವ ಬಗ್ಗೆ ಶ್ರೀ ಕೆ.ಜಿ. ಶೇಷಗಿರಿರಾವ್, ನಿವೃತ್ತ ಎಸ್.ಪಿ. ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶ ದಿನಾಂಕ:10.11.2003 ರಂದು ಭಾಗಶಃ ಮಾರ್ಪಡಿಸಿ ಡಿ.ಐ.ಜಿ.ಪಿ. (ತರಬೇತಿ) ಇವರ ಬದಲಾಗಿ ಐ.ಜಿ.ಪಿ. (ತರಬೇತಿ) ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಐ.ಜಿ.ಪಿ. ತರಬೇತಿ ಹುದ್ದೆಯು ದಿನಾಂಕ: 01.02.2007 ರಿಂದ ಖಾಲಿ ಇರುವುದರಿಂದ ಸದರಿ ಇಲಾಖಾ ವಿಚಾರಣೆಯನ್ನು ಹಾಲಿ ಪ್ರಭಾರದಲ್ಲಿರುವ ಶ್ರೀ ಸುನೀಲ್ ಅಗರವಾಲ್, ಡಿ.ಐ.ಜಿ.ಪಿ. (ತರಬೇತಿ) ರವರು ಕೈಗೊಂಡಿದ್ದು, ಅವರು ವಿಚಾರಣೆಯನ್ನು ಮುಂದುವರಿಸಲು ಸಾಧ್ಯವಾಗದ ಕಾರಣ ಮತ್ತು ಈಗಾಗಲೇ ಇಲಾಖಾ ವಿಚಾರಣೆಯಲ್ಲಿ ಸಾಕಷ್ಟು ವಿಳಂಬವಾಗಿರುವುದರಿಂದ ಐ.ಜಿ.ಪಿ. (ತರಬೇತಿ) ಬೆಂಗಳೂರು ರವರ ಬದಲಾಗಿ ನಿರ್ದೇಶಕರು, ಕೆ.ಪಿ.ಎ., ಮೈಸೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 282 ಪೊಸಿಪ 2003, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಈಗಾಗಲೇ ಹೊರಡಿಸಿರುವ ಸರ್ಕಾರದ ಇದೇ ಸಮ ಸಂಖ್ಯೆಯ ಆದೇಶ ದಿನಾಂಕ: 19.05.2006ನ್ನು ಭಾಗಶಃ ಮಾರ್ಪಡಿಸಿ, ಐ.ಜಿ.ಪಿ. ತರಬೇತಿ, ಬೆಂಗಳೂರು ರವರ ಬದಲಾಗಿ ನಿರ್ದೇಶಕರು, ಕೆ.ಪಿ.ಎ., ಮೈಸೂರು ರವರನ್ನು ವಿಚಾರಣಾಧಿಕಾರಿನ್ನಾಗಿ ನೇಮಿಸಲಾಗಿದೆ.

ದಿನಾಂಕ: 10.11.2003ರ ಆದೇಶದಲ್ಲಿ ಉಳಿದ ಇತರ ಅಂಶಗಳ ಬಗೆಗಿನ ಆದೇಶಗಳು ಯಥಾವತ್ತಾಗಿ ಮುಂದುವರಿಯುತ್ತವೆ. ಈ ವಿಚಾರಣೆಯನ್ನು 3 ತಿಂಗಳ ಒಳಗೆ ಮುಗಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1515

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## COMMERCE AND INDUSTRIES SECRETARIAT

**Subject:** Project proposal of M/s ACC Limited for Satellite grinding unit at Kuditini Village, Bellary Taluk and District.

**Read:** Proceedings of the 8th State High Level Clearance Committee [SHLCC] meeting held on 23.2.2007.

**Preamble:**

The Project proposal of M/s. The Associated Cement Companies Ltd., to establish '' Portland Pozzolona Cement Plant of 3 MMTPA capacity "with an investment of Rs.295.83 crores, in 100 acres of land, within the thermal power plant premises of KPCL at Torangallu, Bellary Taluk & District was approved in the 7th SHLCC meeting held on 28.8.2006. KPCL has informed about the non-availability of land and water within their thermal power plant premises at Torangallu, due to KPCLs own plans for expansion.

In view of this the promoters have requested to change the project site from Torangallu to Kuditini and they also requested to include PSC (Portland Blast Furnace Slag Cement) as an additional product for manufacture in the said plant. Promoters also informed that they need 153 acres additional land for railway siding and want land to be acquired on consent basis through KIADB or under section 109 of KLR Act.

The proposal of the Company was discussed in 8th SHLCC meeting held on 23.2.2007 and approved revised proposal of the Company.

The Company wide letter dated 21.6.2007 has intimated that they have obtained consent for acquisition of the land permission to purchase land under Section 109 from all the land owners in the new location at Kudithini Village Bellary Taluk & District. And some of the land owners have requested the company to acquire entire land in the survey numbers owned them instead of part of the land proposed to be acquired/purchased earlier. And hence the Company requested for approval of consent for acquisition/purchase under 109 of KLR Act for 274.21 acres of land.

**GOVERNMENT ORDER NO: CI 158 SPI 2007, BANGALORE, DATED: 07th August 2007**

In the circumstances explained above, M/s. The Associated Cement Companies Ltd., permitted to establish Portland Pozzolana cement plant /Portland Blast Furnace Slag Cement plant of 3 MMTPA Capacity with an investment of Rs.295.83 crores in 274 acres of land at Kudithini village of Bellary Taluk of Bellary District.

**INFRASTRUCTRE FACILITIES:**

**Land:** Recommendation to be made to Deputy Commissioner, Bellary to permit the Company to purchase 274 acres of land U/s Section 109 of KLR Act and convert the same for Industrial purpose there after at kuditini Village.

**Power:** KPTCL to provide wheeling and Banking facilities, to meet 24 MW power requirement for the project, from their captive power plant at Wadi.

**Environment:** The promoters were advised to obtain CFE from KSPCB and ECC from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy providing Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the Company shall prepare a vendor development plan.,_develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**Incentives and Concessions:-** As per New Industrial Policy 2006-11

**Others:**

The promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned. All other conditions of approval of 7th State High Level Clearance Committee shall be applicable.

This approval is valid for a period of two years from the date of issue.

By Order and in the name of the Governor of Karnataka

**K.R. Chandramma**

P.R. 1516

Desk Officer (Technical Cell)

Commerce & Industries Department

**ENERGY SECRETARIAT**

**Sub:** Approval for Power Purchase Agreement (PPA) to be entered into by ESCOMs with M/s Hassan Thermal Power (P) Limited for establishment of 1x500 MW Coal Based Power Plant at Hassan.

**Read:** Director (Procurement), State Power Procurement Co-ordination Centre letter No. SPPCC/A-14/ 114/ 2005-06/ 3380 Dated:28.06.2007 addressed to ACS & Principal Secretary to Govt. Energy Dept.

**PREAMBLE**:

1. M/s Euro India Power Canara Pvt. Ltd., (EIPCL) was accorded permission to set up LSHS-based Barge Mounted Power Project of 150 MW capacity at Mulki near Mangalore vide G.O. No.DE 98 PPC 96 Dated:31.10.1998.

2. M/s EIPCL later requested Government to enhance the capacity from 150 MW to 195 MW. Government in G.O. No. DE 98 PPC 96 Dated:31.03.1999 gave permission to enhance the capacity of the Barge Mounted Power Project to 195 MW and to change the fuel from LSHS to Naphtha.

3. Thereafter KEB and EIPCL finalized and signed the Power Purchase Agreement on 22.04.1999. Since KERC was not in existence at that time, the PPA was not filed before the Regulatory Commission.

4. On 19.09.2000, KPTCL reported to Government that in view of the rising trend in the international prices of liquid fuels such as LSHS, furnace oil and naphtha, a liquid fuel based power project would not be attractive from the financial point of view for the power utilities. On 18.12.2000 Government wrote to M/s. EIPCL stating that the tariff of Rs.3.80 per unit for the first seven years was too high and if the Company was still interested in the project, it would have to reduce the tariff substantially.

5. Thereafter EIPCL submitted a proposal Dated:27.12.2000 stating that the power Project would be land-based and coal-fired with a capacity of 220 MW located in one of the adjoining districts of Bangalore. Government in letter No. DE 98 PPC 96 Dated:19.02.2001 accorded in principle approval to EIPCL's land-based power project with coal as fuel and a capacity of 220 MW to be located in one of the adjoining districts of Bangalore, treating the Company's proposal as an extended bid route project.

6. On 10.05.2001, Government gave in principle clearance under Section 18A of the Indian Electricity (Supply) Act, 1948 to EIPCL to establish, operate and maintain a 1x220 MW Thermal Power Project at Mandya.

7. Thereafter, on 12.05.2001 EIPCL requested Government to direct KPTCL to amend the PPA to reflect various changes in the project parameters, namely, location, fuel, capacity, tariff, term of PPA and performance guarantee. In G.O. No. DE 98 PPC 96 Dated:22.05.2001 Government gave approval to make the following amendments:

| | | |
|---|---|---|
| (i) | Location | Mandya District |
| (ii) | Fuel | Coal |
| (iii) | Capacity | 220 (Gross)/ 220 MW (Nett) |
| (iv) | Tariff | Least cost tariff may be negotiated with M/s EIPCL |
| (v) | Term of PPA | Negotiable (to be incorporated in the amended PPA) |
| (vi) | Performance Guarantee to be linked to the construction of the project instead of achievement of financial closure- | negotiable - to be incorporated in the amended PPA |

8. However, EIPCL and KPTCL did not finalise the revised PPA. EIPCL invoked the arbitration clause in the PPA for recovery of alleged damages suffered by them on account of inaction on the part of KPTCL. KPTCL opposed the claim in the arbitration proceedings. During the pendency of the arbitration, EIPCL informed that it wishes to renegotiate with KPTCL with a view to settle the matter amicably. KPTCL said that it is willing to commence negotiations if the arbitration proceedings were terminated. Hence the arbitration proceedings were closed.

9. M/s EIPCL in its letter Dated:03.07.2006 requested for:

(i) change of location of the power project to Hassan and

(ii) revival of the PPA/ resumption of the discussions to arrive at an early conclusion of the PPA.

10. The Company has selected Hassan as a suitable site on the grounds that a Special Economic Promotion Zone (SEPZ) is being set up at Hassan, the plant will use imported coal which will be transported from Mangalore port to Hassan by rail and the plant would draw the required quantity of water from the nearby Hemavathi reservoir.

11. The National Tariff Policy issued by Government of India on 06.01.2006 states that all future requirements of power should be procured through competitive bidding. These guidelines would be applicable with prospective effect and would not apply to projects which had already been approved before the Electricity Act, 2003 came into force. In this case, Government gave approval on 22.05.2001 to make various changes in the PPA such as change of location and change of fuel. The Government Order also stated that least cost tariff may be negotiated with M/s EIPCL. The G.O. directed the Chairman and Managing Director, KPTCL to make necessary changes in the project parameters and obtain approval of the Government for the amended PPA. However, this process was not completed by KPTCL. and arbitration proceedings were started. During arbitration, KPTCL also agreed to negotiate the PPA on new terms. Also Government considers that this is an opportunity to get a medium-sized power plant established in the State within a short period of time. Hence Government gave approval for change of location of the project from Mandya District to Hassan. Government also directed that a team consisting of Director (Procurement), State Power Procurement Coordination Centre, MD, BESCOM and MD, CESC would re-negotiate the PPA with EIPCL subject to the condition that no guarantee would be given by the Government and the tariff should not be higher than the tariffs in respect of KPCL's thermal power plants.

12. Initially EIPCL had proposed to set up a 300 MW plant. However, during negotiations on PPA it was found that the rates proposed by EIPCL for 300 MW plant were higher than the rates proposed by KPCL for the Bellary Thermal Power Station. EIPCL said that their plant was for 300 MW capacity and BTPS was of 500 MW capacity. Parameters like Heat Rate and Auxiliary Consumption were higher for the 300 MW plant and therefore the rates were higher. Hence the Negotiating Committee recommended that EIPCL be permitted to enhance the capacity to one unit of 500 MW and that EIPCL should offer the tariff of Bellary Thermal Power Station subject to adjustment towards increased interest rate.

13. Accordingly, Government gave approval on 19.04.2007 to enhance the capacity of the proposed power plant at Hassan to one unit of 500 MW subject to the condition that the tariff should not be higher than the tariff of Bellary Thermal power Station.

14. In the meantime, the name of the Company has been changed to Hassan Thermal Power (P) Limited. After negotiations, M/s Hassan Thermal Power (P) Ltd. has initialled a PPA with the MDs of all the ESCOMs. Director (Procurement), State Power Procurement Coordination Centre vide letter Read above has sent the draft PPA for the approval of the Government.

15. The PPA has fixed the tariff parameters on par with Bellary Thermal Power Station of Karnataka Power Corporation Limited (KPCL). Capital cost has been fixed at Rs.2100 crores, which is the figure reported by KPCL. The capacity charge has been adjusted with an interest rate of 11.5%. Hassan Thermal Power states that the interest rate is now higher than what was paid by KPCL for BTPS. Hence the fixed cost is adjusted for interest of 11.5%. However, if the interest rate is less than 11.5%, this will be reduced accordingly. The energy charge is the same as the figure for Bellary Thermal Power Station and is kept constant throughout the project period. This is subject to variations in exchange rate as the Hassan plant will be using imported coal whereas BTPS uses domestic coal. The first year tariff will be Rs.2.53 and the levelised tariff will be Rs.2.24.

Government examined the above proposal and hence the following order:

**Government Order No. EN 36 PPC 2007, Bangalore Dated:30th July, 2007**

Government are pleased to accord approval to the draft Power Purchase Agreement entered in to between M/s. Hassan Thermal Power (P) Limited and the five ESCOMs namely Bangalore Electricity Supply Company Limited, Mangalore Electricity Supply Company Limited, Gulbarga Electricity Supply

